| ಕ್ರ.ಸಂ | ಗ್ರಾಮಗಳ ಹೆಸರು | ಪ್ರಸಕ್ತ ಸಾಲಿನ ಪರಿಷ್ಕೃತ ಮಾರುಕಟ್ಟೆ ಬೆಲೆ | | | |
|---|---|---|---|---|---|
| | | ಖುಷ್ಕಿ ಎಕರೆ 1 ಕ್ಕೆ ರೂ.ಗಳಲ್ಲಿ | ತರಿ ಎಕರೆ 1 ಕ್ಕೆ ರೂ.ಗಳಲ್ಲಿ | ಭಾಗಾಯ್ತು ಎಕರೆ 1 ಕ್ಕೆ ರೂ.ಗಳಲ್ಲಿ | ನಿವೇಶನ ಚ.ಅಡಿ1ಕ್ಕೆ ರೂಗಳಲ್ಲಿ |
| **1** | **2** | **7** | **9** | **11** | **13** |
| 197 | **ಹೊಸಹಳ್ಳಿ** | | | | |
| | ರಾಜ್ಯ ಹೆದ್ದಾರಿಗೆ ಹೊಂದಿಕೊಂಡಿರುವ ಜಮೀನುಗಳ ಸರ್ವೆ ನಂಬರುಗಳು | 450000 | 450000 | 450000 | 25 |
| | ಊರಿನ ಕೂಡು ರಸ್ತೆಗಳಿಗೆ ಹೊಂದಿಕೊಂಡಿರುವ ಜಮೀನುಗಳ ಸ.ನಂ.ಗಳು | 312000 | 312000 | 312000 | 25 |
| | ಇತರೆ ಜಮೀನುಗಳು | 156000 | 156000 | 218000 | 25 |
| | ಭೂ–ಪರಿವರ್ತಿತ ನಿವೇಶನ | – | – | – | 25 |
| | ಗ್ರಾಮಠಾಣಾ ನಿವೇಶನ | – | – | – | 25 |
| | ದಾಖಲೆ ಗ್ರಾಮ ನಿವೇಶನ | – | – | – | 25 |
| 198 | **ಸೋಂಪುರ** | | | | |
| | ರಾಜ್ಯ ಹೆದ್ದಾರಿಗೆ ಹೊಂದಿಕೊಂಡಿರುವ ಜಮೀನುಗಳ ಸರ್ವೆ ನಂಬರುಗಳು | 90000 | 126000 | 162000 | 25 |
| | ಊರಿನ ಕೂಡು ರಸ್ತೆಗಳಿಗೆ ಹೊಂದಿಕೊಂಡಿರುವ ಜಮೀನುಗಳ ಸ.ನಂ. ಗಳು | – | – | – | 25 |
| | ಇತರೆ ಜಮೀನುಗಳು | – | – | – | 25 |
| | ಭೂ–ಪರಿವರ್ತಿತ ನಿವೇಶನ | – | – | – | 25 |
| | ಗ್ರಾಮಠಾಣಾ ನಿವೇಶನ | – | – | – | 25 |
| | ದಾಖಲೆ ಗ್ರಾಮ ನಿವೇಶನ | – | – | – | 25 |
| | | | | | |
| 199 | **ಸೋಂಪುರ ಕಾವಲು** | | | | |
| | ಇತರೆ ಜಮೀನುಗಳು | 78000 | 109000 | 140000 | 25 |
| | ಭೂ–ಪರಿವರ್ತಿತ ನಿವೇಶನ | – | – | – | 25 |
| | ಗ್ರಾಮಠಾಣಾ ನಿವೇಶನ | – | – | – | 25 |
| | ದಾಖಲೆ ಗ್ರಾಮ ನಿವೇಶನ | – | – | – | 25 |
| 200 | **ಸಿದ್ದಾಪುರ** | | | | |
| | ರಾಜ್ಯ ಹೆದ್ದಾರಿಗೆ ಹೊಂದಿಕೊಂಡಿರುವ ಜಮೀನುಗಳ ಸರ್ವೆ ನಂಬರುಗಳು 30/1, 31/1, 31/2, 35, 37, 38/1, 38/2, 39, 40, 50/1,. 50/2, 51, 29ಪಿ1, 29/ಪಿ2, 61, 6/1ಸಿ | 630000 | 630000 | 630000 | 30 |
| | ಊರಿನ ಕೂಡು ರಸ್ತೆಗಳಿಗೆ ಹೊಂದಿಕೊಂಡಿರುವ ಜಮೀನುಗಳ ಸರ್ವೆ ನಂಬರುಗಳು 39,40,38,37,35,34,31,30,50,51,61,29,5,6,63,42,45,41, | 312000 | 312000 | 390000 | 25 |

| ಕ್ರ.ಸಂ | ಗ್ರಾಮಗಳ ಹೆಸರು | ಪ್ರಸಕ್ತ ಸಾಲಿನ ಪರಿಷ್ಕೃತ ಮಾರುಕಟ್ಟೆ ಬೆಲೆ | | | |
|---|---|---|---|---|---|
| | | ಖುಷ್ಕಿ ಎಕರೆ 1 ಕ್ಕೆ ರೂ.ಗಳಲ್ಲಿ | ತರಿ ಎಕರೆ 1 ಕ್ಕೆ ರೂ.ಗಳಲ್ಲಿ | ಭಾಗಾಯ್ತು ಎಕರೆ 1 ಕ್ಕೆ ರೂ.ಗಳಲ್ಲಿ | ನಿವೇಶನ ಚ.ಅಡಿ1ಕ್ಕೆ ರೂಗಳಲ್ಲಿ |
| **1** | **2** | **7** | **9** | **11** | **13** |
| | ಇತರೆ ಜಮೀನುಗಳು | 156000 | 156000 | 234000 | 25 |
| | ಭೂ–ಪರಿವರ್ತಿತ ನಿವೇಶನ | – | – | – | 25 |
| | ಗ್ರಾಮಠಾಣಾ ನಿವೇಶನ | – | – | – | 25 |
| | ದಾಖಲೆ ಗ್ರಾಮ ನಿವೇಶನ | – | – | – | 25 |
| | | | | | |
| 201 | **ಬಸವನ ಮತ್ತೀಕೆರೆ** | | | | |
| | ಊರಿನ ಕೂಡು ರಸ್ತೆಗಳಿಗೆ ಹೊಂದಿಕೊಂಡಿರುವ ಜಮೀನುಗಳ ಸರ್ವೆ ನಂಬರುಗಳು 25,26,22,14,13,11,112,10,9,8,6, | 125000 | 140000 | 211000 | 25 |
| | ಇತರೆ ಜಮೀನುಗಳು | 109000 | 125000 | 195000 | 25 |
| | ಭೂ–ಪರಿವರ್ತಿತ ನಿವೇಶನ | – | – | – | 25 |
| | ಗ್ರಾಮಠಾಣಾ ನಿವೇಶನ | – | – | – | 25 |
| | ದಾಖಲೆ ಗ್ರಾಮ ನಿವೇಶನ | – | – | – | 25 |
| 202 | **ರಾಗಿಹಳ್ಳಿ** | | | | |
| | ರಾಜ್ಯ ಹೆದ್ದಾರಿಗೆ ಹೊಂದಿಕೊಂಡಿರುವ ಜಮೀನುಗಳ ಸರ್ವೆ ನಂಬರುಗಳು | 125000 | 140000 | 211000 | 25 |
| | ಊರಿನ ಕೂಡು ರಸ್ತೆಗಳಿಗೆ ಹೊಂದಿಕೊಂಡಿರುವ ಜಮೀನುಗಳ ಸ. ನಂ.ಗಳು | 117000 | 125000 | 195000 | 25 |
| | ಇತರೆ ಜಮೀನುಗಳು | – | – | – | 25 |
| | ಭೂ–ಪರಿವರ್ತಿತ ನಿವೇಶನ | – | – | – | 25 |
| | ಗ್ರಾಮಠಾಣಾ ನಿವೇಶನ | – | – | – | 25 |
| | ದಾಖಲೆ ಗ್ರಾಮ ನಿವೇಶನ | – | – | – | 25 |

## ಕೇಂದ್ರ ಮೌಲ್ಯಮಾಪನಾ ಸಮಿತಿ

### ಮೌಲ್ಯಮಾಪನಕ್ಕೆ ರಾಜ್ಯಾದ್ಯಂತ ಅನುಸರಿಸಬೇಕಾದ ಪ್ರಸ್ತಾವಿತ ಕಟ್ಟಡಗಳ ದರಗಳು

ಉಲ್ಲೇಖ :– ಕೇಂದ್ರ ಮೌಲ್ಯಮಾಪನಾ ಸಮಿತಿಯ ನಡವಳಿಕೆಗಳ ಪ್ರಕಾರ

| ಕ್ರ.ಸಂ | ಕಟ್ಟಡದ ತರಹೆ | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿ | | ರಾಜ್ಯದಾದ್ಯಂತ ಮಹಾನಗರಪಾಲಿಕೆ, ಮೈಸೂರು, ಮಂಗಳೂರು ಹುಬ್ಬಳ್ಳಿ,ಧಾರವಾಡ, ಗುಲ್ಬರ್ಗ, ಬಳ್ಳಾರಿ, ಬೆಳಗಾವಿ ಮತ್ತು ದಾವಣಗೆರೆ ವ್ಯಾಪ್ತಿ | | ರಾಜ್ಯದಾದ್ಯಂತ ಎಲ್ಲಾ ನಗರಸಭೆ ವ್ಯಾಪ್ತಿ | | ರಾಜ್ಯದಾದ್ಯಂತ ಎಲ್ಲಾ ಪಟ್ಟಣ,ಪುರಸಭೆ, ಪಟ್ಟಣಪಂಚಾಯ್ತಿ ವ್ಯಾಪ್ತಿ | | ರಾಜ್ಯದಾದ್ಯಂತ ಎಲ್ಲಾ ಇತರೆ ಪ್ರದೇಶಗಳಿಗೆ | |
|---|---|---|---|---|---|---|---|---|---|---|---|
| | | ನೆಲಮಹಡಿ | ಮೇಲ್ಮಹಡಿ | ನೆಲಮಹಡಿ | ಮೇಲ್ಮಹಡಿ | ನೆಲಮಹಡಿ | ಮೇಲ್ಮಹಡಿ | ನೆಲಮಹಡಿ | ಮೇಲ್ಮಹಡಿ | ನೆಲಮಹಡಿ | ಮೇಲ್ಮಹಡಿ |
| 1 | ಆರ್.ಸಿ.ಸಿ. ಗ್ರಾನೈಟ್ ನೆಲಹಾಸು ತೇಗದ ಮರ | 950 | 900 | 900 | 850 | 850 | 800 | 800 | 750 | 750 | 700 |
| 2 | ಆರ್.ಸಿ.ಸಿ. ಮಾರ್ಬಲ್ ನೆಲಹಾಸು ತೇಗದ ಮರ | 750 | 700 | 700 | 650 | 650 | 600 | 650 | 600 | 600 | 550 |
| 3 | ಆರ್.ಸಿ.ಸಿ.ಮೊಸಾಯಿಕ್/ವೆಟ್ರಫೈಡ್/ಸೆರಾ ಮಿಕ್ ನೆಲಹಾಸು, ತೇಗದಮರ | 700 | 650 | 650 | 600 | 600 | 550 | 550 | 500 | 500 | 450 |
| 4 | ಆರ್.ಸಿ.ಸಿ ಮೊಸಾಯಿಕ್ ಪಾಲಿಷ್ಡ್ ಕಡಪ/ಸಹಬಾದ/ಬೇತಮ್ ಜಲ್ಲಿ ನೆಲಹಾಸು, ಹೊನ್ನೆಮರ, ಉಕ್ಕಿನಕಿಟಕಿಗಳು | 650 | 600 | 600 | 550 | 550 | 500 | 500 | 450 | 450 | 400 |
| 5 | ಆರ್.ಸಿ.ಸಿ ರೆಡಾಕ್ಸೈಡ್ ನೆಲಹಾಸು, ಎಲ್ಲಾ ರೀತಿಯ ಮರವನ್ನು ಅಥವಾ ಉಕ್ಕಿನ ಕಿಟಕಿ | 550 | 500 | 500 | 450 | 450 | 400 | 450 | 400 | 350 | 300 |
| 6 | ಮದ್ರಾಸ್ ತಾರಸಿ,/ಕಡೆಬಂಡಿತೇರು ಮಂಗಳೂರು ಹೆಂಚು ಎ.ಸಿ.ಶೀಟ್ ರೆಡ್ ಆಕ್ಸೈಡ್ ನೆಲಹಾಸು ಕಾಡಿನಮರ, ಸಿಮೆಂಟ್‌ಗಾರೆ ಗೋಡೆ | 350 | | 350 | | 325 | | 300 | | 300 | |
| 7 | ಮದ್ರಾಸ್ ತಾರಸಿ,ಮಂಗಳೂರು ಹೆಂಚು, ಎ.ಸಿ.ಶೀಟ್ | 250 | | 250 | | 225 | | 200 | | 200 | |
| 8 | ಕರಿಹೆಂಚು, ಮಣ್ಣಿನಮೇಲ್ಚುದಿ, ಕಡಪ, ಮಣ್ಣಿನ ಗೋಡೆ, ಕಾಡಿನಮರ, ಗುಡಿಸಲುಚಪ್ಪರ | | | | | | | | | 100 | |
| 1 | ಬಹುಮಹಡಿ ಕಟ್ಟಡದ ವಾಹನ ನಿಲ್ದಾಣದ ಬಗ್ಗೆ | 100000 | 75000 | 90000 | 65000 | 80000 | 55000 | 70000 | 45000 | 60000 | 35000 |

By order and in the name of Central Valuation Committee, Bangalore

**V. SUJATHA**
Taluk Valuation Sub Committee,
Kunigal Taluk, Tumkur District

**PR-59**
**Sc- 100**

## ಕರ್ನಾಟಕ ಗೃಹ ಮಂಡಳಿ

ಗೃಹ ಆಯುಕ್ತರು, ಕರ್ನಾಟಕ ಗೃಹ ಮಂಡಳಿ, ಬೆಂಗಳೂರು

**ಅಧಿಸೂಚನೆ**

**ಸಂಖ್ಯೆ : ಕ.ಗೃ.ಮಂ. ಭೂಸ್ವಾವಿ/53/2010–11, ದಿನಾಂಕ 02ನೇ ನವೆಂಬರ್ 2012**

ಕರ್ನಾಟಕ ಕಾಯ್ದೆ 33 ರಲ್ಲಿ ತಿದ್ದುಪಡಿಯಾದ 1894ನೇ ಸಾಲಿನ ಭೂಸ್ವಾಧೀನ ಕಾಯ್ದೆ (ಕೇಂದ್ರ ಕಾಯ್ದೆ 46) ರಲ್ಲಿ ವಿಧಿತವಾದ ಅಧಿಕಾರದಂತೆ ಹಾಗೂ ಕರ್ನಾಟಕ ಜನರಲ್ ಕ್ಲಾಸ್ ಆಕ್ಟ್ 1897 (ಆಕ್ಟ್ iii ಆಫ್ 1889 ಕಲಂ 21)ರ ಅನ್ವಯ ಈ ಕಛೇರಿಯಿಂದ ಹೊರಡಿಸಲಾಗಿದ್ದ 4(1)ರ ಅಧಿಸೂಚನೆ ಕ್ರಮಾಂಕ : ಕ.ಗೃ.ಮಂ. ಭೂಸ್ವಾವಿ/53/2010–11 ದಿನಾಂಕ 15 ಸೆಪ್ಟೆಂಬರ್ 2010ರ ಅಧಿಸೂಚನೆಯು ಕರ್ನಾಟಕ ರಾಜ್ಯಪತ್ರದ ಭಾಗ–3 ಪುಟ 4682 ರಿಂದ 4686 ರವರೆಗೆ ದಿನಾಂಕ 02–12–2010ರ ರಾಜ್ಯಪತ್ರದಲ್ಲಿ ಪ್ರಕಟವಾಗಿದ್ದು, ದಿನಾಂಕ 17–10–2012ರ ಮಂಡಳಿ ಸಭೆಯ ನಿರ್ಣಯದಂತೆ, ಉತ್ತರಕನ್ನಡ ಜಿಲ್ಲೆ, ಹೊನ್ನಾವರ ತಾಲ್ಲೂಕು, ಹೊನ್ನಾವರ ಹೋಬಳಿ, ಹೊನ್ನಾವರ ಗ್ರಾಮದ ಒಟ್ಟು 93–32 ಎಕರೆ ಜಮೀನುಗಳ ಭೂಸ್ವಾಧೀನವನ್ನು ಕೈಬಿಟ್ಟು ಸದರಿ ಪ್ರಕಟಣೆಯನ್ನು ಹಿಂತೆಗೆದುಕೊಳ್ಳಲಾಗಿದೆ.

**ಗೃಹ ಆಯುಕ್ತರು,**
ಕರ್ನಾಟಕ ಗೃಹ ಮಂಡಳಿ,
ಬೆಂಗಳೂರು

PD. 08
SC. 25

## ಬಿಟಿ ಪ್ರೊಫೆಶನಲ್ ಸರ್ವೀಸಸ್ (ಇಂಡಿಯಾ) ಪ್ರೈ. ಲಿಮಿಟೆಡ್

ನೋಂದಣಿ ಕಚೇರಿ: 602, ಟವರ್ ಬಿ, ಆರ್‌ಎಂರುಡ್ ಇನ್ಫಿನಿಟಿ,
ಮುನ್ಸಿಪಲ್ ನಂ. –3, ಹಳೇ ಮದ್ರಾಸ್ ರೋಡ್, ಬೆನ್ನಿಂಗನಹಳ್ಳಿ,
ಬೆಂಗಳೂರು, ಕರ್ನಾಟಕ–560 016

**ಸಾರ್ವಜನಿಕ ಪ್ರಕಟಣೆ**

ದಿನಾಂಕ: 3ನೇ ಜನವರಿ, 2014

ಸದಸ್ಯರು ಸ್ವಯಂ ಕಂಪೆನಿಯನ್ನು ಕೊನೆಗೊಳಿಸುವ ವಿಷಯದಲ್ಲಿ ಕಂಪೆನಿಗಳ ಕಾಯ್ದೆ 1956ರ ಸೆಕ್ಷನ್ 485(1)ಕ್ಕೆ ಅನುಸಾರ ಈ ಮೂಲಕ ನೀಡಿರುವ ನೋಟೀಸ್ ಏನೆಂದರೆ ಸೆಪ್ಟೆಂಬರ್ 3ರಂದು ನಡೆದ ಸದಸ್ಯರ ವಿಶೇಷ ಮಹಾಸಭೆಯಲ್ಲಿ ಕೆಳಗಿನ ವಿಶೇಷ ನಿರ್ಣಯಗಳನ್ನು ಕಂಪೆನಿ ಅಂಗೀಕರಿಸಿದೆ. ಅಗತ್ಯವಾದಲ್ಲಿ 2014ರಲ್ಲಿ ಸ್ವಯಂ ಕಂಪೆನಿಯನ್ನು ಕೊನೆಗಾಣಿಸಬಹುದಾಗಿದೆ.

ಪಾಸಾದ ನಿರ್ಣಯ ಏನೆಂದರೆ ಕಂಪೆನಿಗಳ ಕಾಯ್ದೆ 1956ರ ಸೆಕ್ಷನ್ 484(1)(ಬಿ) ನಿಬಂಧನೆಗಳು ಮತ್ತು ಯಾವುದೇ ಇತರ ಕರಾರುಗಳು ಕಂಪೆನಿ ಸದಸ್ಯರುಗಳಿಗೆ ಕಂಪೆನಿಯನ್ನು ಸ್ವಯಂ ಕೊನೆಗೊಳಿಸಲು ಈ ಮೂಲಕ ಕಂಪೆನಿಯ ಶೇರುದಾರರು ಸಮ್ಮತಿಸುತ್ತಾರೆ.

ಪಾಸಾದ ಇನ್ನೊಂದು ನಿರ್ಣಯ ಏನೆಂದರೆ ಸಾಲ್ವೆನ್ಸಿ ಡಿಕ್ಲರೇಷನ್ ಮತ್ತು ಅಂದಾಜಿಸಲಾದ ಆಸ್ತಿಗಳ ಮತ್ತು ಸಾಲಸೋಲಗಳ ಮೌಲ್ಯ ಗಳಿಕೆ 2013 ಮಾರ್ಚ್ 31ರಂದು ಇದ್ದಂತೆ ನಿರ್ದೇಶಕರು ಒಪ್ಪಿಗೆ ನೀಡಿ ದೃಢಪಡಿಸಿದ ಪ್ರಮಾಣಕ್ಕನುಸಾರ ಕಂಪೆನಿಯಿಂದ ಪಾವತಿಯಾಗಲಿದೆ.

ಮತ್ತೊಂದು ನಿರ್ಣಯ ಏನೆಂದರೆ ರೂ. 25,000 (ರೂ. ಇಪ್ಪತ್ತೈದು ಸಾವಿರ ಮಾತ್ರ) ಪ್ಲಸ್ ಔಟ್ ಆಫ್ ಪಾಕೆಟ್ ವೆಚ್ಚಗಳೇನಿದ್ದರೂ ಭರ್ತಿ ಮಾಡುವ ಸಂಭಾವನೆಯಲ್ಲಿ ಕಂಪೆನಿಯ ಲಿಕ್ವಿಡೇಟರ್ ಆಗಿ ಶ್ರೀ ನವೀನ್ ನರಂಗ್ ಅವರು ಈ ಮೂಲಕ ನೇಮಕವಾಗಿರುತ್ತಾರೆ.

ಇನ್ನೊಂದು ನಿರ್ಣಯ ಏನೆಂದರೆ ಕಂಪೆನಿಗಳ ಕಾಯ್ದೆ 1956ರ ಸೆಕ್ಷನ್ 512ರೊಂದಿಗೆ ಸೆಕ್ಷನ್ 457ರಲ್ಲಿ ತಿಳಿಸಿರುವ ಎಲ್ಲ ಅಧಿಕಾರಗಳನ್ನು ಈ ಮೂಲಕ ಲಿಕ್ವಿಡೇಟರ್ ಶ್ರೀ ನವೀನ್ ನರಂಗ್ ನಿರ್ವಹಿಸುವುದಕ್ಕೆ ಅಧಿಕಾರ ಹೊಂದಿರುತ್ತಾರೆ. ಅಲ್ಲದೇ ಸದಸ್ಯರಿಗೆ ಕಂಪೆನಿಯ ಆಸ್ತಿಗಳನ್ನು ವಿತರಿಸುವ ಅಧಿಕಾರ ಸಹ ಹೊಂದಿರುತ್ತಾರೆ.

ಮತ್ತೊಂದು ನಿರ್ಣಯ ಏನೆಂದರೆ ಮೇಲಿನ ನಿರ್ಣಯಗಳಿಗೆ ಕಾರ್ಯರೂಪ ನೀಡುವುದಕ್ಕೆ ಅಗತ್ಯದ ಕ್ರಮಕೈಗೊಳ್ಳುವ ಅಧಿಕಾರವನ್ನು ಕಂಪೆನಿಯ ನಿರ್ದೇಶಕರಾದ ಶ್ರೀ ಪವನ್ ಖಂಡೇಲ್‌ವಾಲ್‌ರಿಗೆ ಈ ಮೂಲಕ ವಹಿಸಲಾಗಿದೆ.

ಮಂಡಳಿಯ ಆದೇಶದ ಮೇರೆಗೆ
ಬಿಟಿ ಪ್ರೊಫೆಶನಲ್ ಸರ್ವೀಸಸ್ (ಇಂಡಿಯಾ) ಪ್ರೈ. ಲಿಮಿಟೆಡ್‌ನ ಪರವಾಗಿ
**ಪವನ್ ಕುಮಾರ್ ಖಂಡೇಲ್‌ವಾಲ್**
ನಿರ್ದೇಶಕ

## ಬಿಟಿ ಪ್ರೊಫೆಶನಲ್ ಸರ್ವೀಸಸ್ (ಇಂಡಿಯಾ) ಪ್ರೈ. ಲಿಮಿಟೆಡ್

ನೋಂದಣಿ ಕಚೇರಿ: 602, ಟವರ್ ಬಿ, ಆರ್‌ಎಂರುಡ್ ಇನ್ಫಿನಿಟಿ,
ಮುನ್ಸಿಪಲ್ ನಂ. –3, ಹಳೇ ಮದ್ರಾಸ್ ರೋಡ್, ಬೆನ್ನಿಂಗನಹಳ್ಳಿ, ಬೆಂಗಳೂರು, ಕರ್ನಾಟಕ–560 016

**ಫಾರ್ಮ್ ನಂ. 151**

**(315ನೇ ನಿಯಮ ನೋಡಿ)**

**ಸದಸ್ಯರ ವಲಂಟರಿ ವೈಂಡಿಂಗ್ ಅಪ್**

**ಸೆಕ್ಷನ್ 516ಕ್ಕೆ ಅನ್ವಯಿಸಿ ಲಿಕ್ವಿಡೇಟರ್ ನೇಮಕಾತಿ ನೋಟೀಸ್**

ದಿನಾಂಕ: 03–01–2014

| | | |
|---|---|---|
| ಕಂಪೆನಿಯ ಹೆಸರು | : | ಬಿಟಿ ಪ್ರೊಫೆಶನಲ್ ಸರ್ವೀಸಸ್ (ಇಂಡಿಯ) ಪ್ರೈವೇಟ್ ಲಿಮಿಟೆಡ್ |
| ವ್ಯವಹಾರ ಸ್ವರೂಪ | : | ಕನ್ಸಲ್ಟೆನ್ಸಿ ಮತ್ತು ಸಲಹಾ ಸೇವೆಗಳು |

| | | |
|---|---|---|
| ರಿಜಿಸ್ಟರ್ಡ್ ಕಚೇರಿ ವಿಳಾಸ | : | 602, ಟವರ್ ಬಿ, ಆರ್ ಎಮ್ ಜಡ್ ಇನ್ಫಿನಿಟಿ, ಮುನ್ಸಿಪಲ್,<br>ನಂ. 3, ಹಳೆ ಮದ್ರಾಸ್ ರಸ್ತೆ,<br>ಬೆನ್ನಿಂಗನಹಳ್ಳಿ, ಬೆಂಗಳೂರು – 560016, ಕರ್ನಾಟಕ |
| ಲಿಕ್ವಿಡೇಟರ್(ಗಳ) ಹೆಸರು(ಗಳು)<br>ಮತ್ತು ವಿಳಾಸ(ಗಳು) | : | ಶ್ರೀ ನವೀನ್ ನಾರಂಗ್ ಎಚ್ –3/157<br>2ನೇ ಮಹಡಿ, ವಿಕಾಸ್‌ಪುರಿ, ಹೊಸದಿಲ್ಲಿ – 110018 |
| ನೇಮಕಾತಿ ದಿನಾಂಕ | : | 03–01–2014 |
| ಯಾರಿಂದ ನೇಮಕವಾಗಿದೆ | : | 03–01–2014ರಂದು ನಡೆದ ವಿಶೇಷ ಮಹಾಸಭೆಯಲ್ಲಿ ಹಾಜರಿದ್ದ ಸದಸ್ಯರಿಂದ |

ಸ್ಥಳ: ಹೊಸದಿಲ್ಲಿ

**PD. 12**
**SC. 05**

**ನವೀನ್ ನಾರಂಗ್**
ಲಿಕ್ವಿಡೇಟರ್

## PUBLIC NOTICE

## TOOSTEP CONSULTANCY PRIVATE LIMITED

No. 653, Aishwarya Arcade, 2nd Floor, 2nd Main Road, Domlur Layout,
BANGALORE-560071

Dated 27-01-2014

Notice is hereby given for general information that the members of TOOSTEP CONSULTANCY PRIVATE LIMITED at an Extra Ordinary General Meeting of the Company held on 27-01-2014 at its Registered Office, have passed the following special resolutions to wind up the company voluntarily :

"RESOLVED THAT pursuant to the provisions of section 484(1)(b) of the Companies Act, 1956, consent of the shareholders be and is hereby given for winding up the company.

"RESOLVED FURTHER that Mr. V. Karthick (PCS 4680) be and is hereby appointed as Liquidator of the company for the purpose of winding up on a remuneration of Rs. 1,00,000/- plus applicable taxes, if any.

RESOLVED FURTHER that Mr. V. Karthick, the Liquidator be and is hereby empowered to exercise all powers as provided in sub clauses (i) to (iv) of sub-section (2) of section 457 of the Companies Act, 1956".

TooStep Consultancy Private Limited,

**V. KARTHICK,**
Liquidator.

## FORM NO. 151

**(See rule 315)**

**Members' (or Creditor's) Voluntary Winding up**

**Notice of appointment of liquidator pursuant to section 516**

Dated 27-01-2014

| | | |
|---|---|---|
| Name of company | : | TOOSTEP CONSULTANCY PRIVATE LIMITED |
| Nature of business | : | Rendering consultancy services related to business process Outsourcing |
| Address of Registered Office | : | No. 653, Aishwarya Arcade, 2nd Floor, 2nd Main Road, Domlur Layout, Bangalore-560071 |
| Name(s) and address(es) of Liquidator(s) | : | Mr. V. Karthick,<br>No. 112/D, 2nd Floor, 5th Main, 11th Cross,<br>Malleswaram, Bangalore-560003 |
| Date of appointment | : | 27-01-2014 |
| By whom appointed | : | Shareholders at their meeting held on 27th January 2014 |

TooStep Consultancy Private Limited,

**PD. 13**
**SC. 05**

**V. KARTHICK,**
Liquidator.

**FORM NO. 155**

(See Rule 329)M

Mmembers Voluntary winding-up

**AEG INDIA LIMITED**

(Under Liquidation)

Regd. Off.:

Pine Valley, 3rd Floor, Embassy Golf Links Business Park, off Intermediate Ring Road, BANGALORE-560071

**NOTICE CONVENING FINAL MEETING**

Regd No. U51909KA1970PLC001956

Dated 6th January 2014

Notice is hereby given in pursuance of section 497/*509 that a General meeting of the members of the above named company will be held at Bangalore on 12TH MARCH 2014 at 10.30 AM in the morning for the purpose of having an account laid before them showing the manner in which the winding-up has been conducted and the property of the company disposed off and of hearing any explanation that may be given by the liquidator and also of determining by a special resolution of the company, the manner in which the books, accounts and documents of the company and of the liquidator shall be disposed of.

For AEG India Limited
**HIREN NEGANDHI,**
Signature of the liquidator
AEG INDIA OLTD (In Vol Liqn)

**ನಮೂನೆ ಸಂಖ್ಯೆ 155**

**ಸ್ವತಃ ಸದಸ್ಯರಿಂದ ಅಂತ್ಯಗೊಳಿಸುವಿಕೆ**

**ಸಂಸ್ಥೆಯ ಹೆಸರು : ಎಇಜಿ ಇಂಡಿಯಾ ನಿಯಮಿತ (ಮುಚ್ಚುವ ಸ್ಥಿತಿಯಲ್ಲಿ)**

**ಸಂಸ್ಥೆಯ ಅಂತಿಮ ಸಭೆ ನಡೆಸುವ ಕುರಿತು ತಿಳುವಳಿಕೆ ಪತ್ರ**

ದಿನಾಂಕ: 6ನೇ ಜನವರಿ, 2014

ಕಂಪನಿ ಕಾಯ್ದೆ 1956ರ ಪ್ರಕರಣ 497ರ ಅಡಿಯಲ್ಲಿ ಈ ಮೂಲಕ ತಿಳುವಳಿಕೆ ನೀಡುವುದೇನೆಂದರೆ ಮೇಲಿನ ಸಂಸ್ಥೆಯ ಸರ್ವಸದಸ್ಯರ ಸಭೆಯು ದಿನಾಂಕ 12, ಮಾರ್ಚ್ ಮಾಹೆ 2014 ರಂದು ಬೆಳಿಗ್ಗೆ 10–30 ಗಂಟೆಗೆ ಸಂಸ್ಥೆಯ ನೋಂದಾಯಿತ ಕಛೇರಿ ಸಂಖ್ಯೆ ಪೈನ್ ವ್ಯಾಲಿ, 3ನೇ ಮಹಡಿ, ಎಂಬಸಿ ಗೋಲ್ಡ್ ಲಿಂಕ್ಸ್ ಬಿಸ್‌ನೆಸ್ ಪಾರ್ಕ್, ಇಂಟರ್ ಮೀಡಿಯಟ್ ರಿಂಗ್ ರಸ್ತೆ, ಬೆಂಗಳೂರು–560 071 ಎಂಬಲ್ಲಿ ಸಂಸ್ಥೆಯ ಲೆಕ್ಕ ಪತ್ರಗಳನ್ನು ಸಭೆಯ ಮುಂದೆ ಮಂಡಿಸಿ ಮತ್ತು ಸಂಸ್ಥೆಯನ್ನು ಯಾವ ರೀತಿ ಮುಚ್ಚಲಾಗುತ್ತಿದೆ ಎಂದು ಮತ್ತು ಸಂಸ್ಥೆಯ ಆಸ್ತಿ–ಪಾಸ್ತಿಗಳನ್ನು ಯಾವ ಕ್ರಮದಲ್ಲಿ ವಿಲೇವಾರಿ ಮಾಡಲಾಯಿತು ಎಂದೂ ಮತ್ತು ವಿಲೇವಾರಿ ಮಾಡಿದ ಅಧಿಕಾರಿಯವರ ವಿವರಣೆಯೇನಾದರೂ ಇದ್ದಲ್ಲಿ ಆಲಿಸಲು ಮತ್ತು ಸಭೆಯ ನಡವಳಿಕೆಗಳನ್ನು ವಿಶೇಷವಾದ ಸಭಾಪಟ್ಟಿಯ ಮೂಲಕ ದಾಖಲಿಸಲು ಮತ್ತು ಸಂಸ್ಥೆಯ ಲೆಕ್ಕಪತ್ರಗಳನ್ನು ಅಂತಿಮವಾಗಿ ವಿಲೇವಾರಿ ಮಾಡಿರುವುದನ್ನು ಸಭೆಯಲ್ಲಿ ಚರ್ಚಿಸಲು ಕರೆಯಲಾಗಿದೆ.

ಎ.ಇ.ಜಿ. ಇಂಡಿಯಾ ಲಿಮಿಟೆಡ್‌ನ ಪರವಾಗಿ
**ಹಿರೇನ್ ನೆಗಂಧಿ**
ವಿಲೇವಾರಿ ಅಧಿಕಾರಿ (ಲಿಕ್ವಿಡೇಟರ್)
ಎಇಜಿ ಇಂಡಿಯಾ ನಿಯಮಿತ

**PD. 14**
**SC. 05**

**I-VEN PHARMA CAPITAL LIMITED**

**Regd. Offie : 39/40(p) KIADB Industrial Area, Electronics City Phase II Bangalore-560100**

**Form No. 155**

(See Rule 329)

Member's Voluntary winding up

**(Pursuant to Section 497 of the Companies Act, 1956)**

**NOTICE CONVENING FINAL MEETING**

Notice is hereby given in pursuance of Section 497 of the Companies Act, 1956, that an Extraordinary General Meeting of the Members of the Company will be held on Monday, February 24, 2014 at 11.00 a.m. at its Registered Office situated at 39/40 (P) KIADB Industrial Area, Electronics City Phase II, Bangalore-560100, Karnataka for the following purposes :

1) Laying of an account showing the manner in which the winding up has been conducted :

2) The manner in which the property of the Company is disposed of/distributed and of hearing any explanation that may be given by the Liquidator and

3) Determining by special resolution of the Company, the manner in which books, accounts and documents of the Company and of the liquidator shall be disposed of.

Place : Hyderabad
Dated 22nd January 2014

**SAMPATH RAGHUNATHAN,**
Liquidator
I-VEN PHARMA CAPITAL LIMITED

**PD. 11**
**SC. 05**

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತಿಪಟೂರು ಉಪ ವಿಭಾಗ, ತಿಪಟೂರು ಇವರ ಕಾರ್ಯಾಲಯ

### ಅಧಿಭಾರ ಸಂಖ್ಯೆ : 04/2008-09

**ಅರ್ಜಿದಾರರು :**
ವ್ಯವಸ್ಥಾಪಕರು,
ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ.,
ಹಂದನಕೆರೆ ಚಿ. ನಾಹಳ್ಳಿ ತಾಲ್ಲೂಕು

**ಎದುರು ಅರ್ಜಿದಾರರು :**
ಶ್ರೀ ಹೆಚ್.ಆರ್. ನರಸಿಂಹಮೂರ್ತಿ
ಮಾಜಿ ವ್ಯವಸ್ಥಾಪಕರು
ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ.,
ಹಂದನಕೆರೆ ಚಿ. ನಾಹಳ್ಳಿ ತಾಲ್ಲೂಕು

**ವಾರಸುದಾರರು:**
ಶ್ರೀಮತಿ ಹೆಚ್.ಎನ್. ಗಾಯತ್ರಿದೇವಿ
ಕೋಂ ಲೇಟ್ ಹೆಚ್.ಆರ್. ನರಸಿಂಹಮೂರ್ತಿ
ಹಂದನಕೆರೆ, ಚಿಕ್ಕನಾಯಕನಹಳ್ಳಿ ತಾಲ್ಲೂಕು

**ವಿಷಯ:** ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103ರ ಮೇರೆಗೆ ಹೊರಡಿಸಿದ ತೀರ್ಪು ಮುನ್ನ ಜಪ್ತಿ ಆಜ್ಞೆಯನ್ನು ಹಿಂಪಡೆಯುವ ಕುರಿತು.

**ಓದಲಾಗಿದೆ:**
1. ಈ ಕಚೇರಿಯ ತೀರ್ಪು ಮುನ್ನ ಜಪ್ತಿ ಆಜ್ಞೆಯ ಆದೇಶ ಸಂಖ್ಯೆ : ಸನಿ-34/ಡಿಡಿಎಸ್/ಕಲಂ-103/01/2008-09, ದಿನಾಂಕ 17-7-2009.
2. ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ಹಂದನಕೆರೆ, ತಿಪಟೂರು ತಾಲ್ಲೂಕು ಈ ಸಂಘದ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು ಪತ್ರ ದಿನಾಂಕ 14-12-2013.
3. ಈ ನ್ಯಾಯಾಲಯದ ಅಧಿಭಾರ ಅರ್ಜಿ ಸಂಖ್ಯೆ : 04/2008-09 ರ ಆದೇಶ ದಿನಾಂಕ 17.08.2013.
4. ಶ್ರೀಮತಿ ಹೆಚ್.ಎನ್. ಗಾಯತ್ರಿದೇವಿ ಕೋಂ ಲೇಟ್ ಹೆಚ್.ಆರ್. ನರಸಿಂಹಮೂರ್ತಿ ಹಂದನಕೆರೆ, ಚಿಕ್ಕನಾಯಕನಹಳ್ಳಿ ತಾಲ್ಲೂಕು ಇವರ ಪತ್ರ ದಿನಾಂಕ 16-12-2013.

**ಪೀಠಿಕೆ:-**

ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ., ಹಂದನಕೆರೆ, ಚಿಕ್ಕನಾಯಕನಹಳ್ಳಿ ತಾಲ್ಲೂಕು, ಈ ಸಂಘದ ಮಾಜಿ ವ್ಯವಸ್ಥಾಪಕರಾದ ಶ್ರೀ ಹೆಚ್.ಆರ್. ನರಸಿಂಹಮೂರ್ತಿ, ಇವರು ಸಂಘದಲ್ಲಿ ದುರುಪಯೋಗಪಡಿಸಿಕೊಂಡಿರುವ ಬಾಬ್ತುಗಳಿಗೆ ಸಂಬಂಧಿಸಿದಂತೆ, ಉಲ್ಲೇಖ (3)ರ ದಾವೆಯಲ್ಲಿ ವಸೂಲಾತಿ ಆದೇಶ ನೀಡಿದ್ದು, ದುರುಪಯೋಗದ ಮೊತ್ತ ರೂ. 293969.80 ಗಳ ವಸೂಲಾತಿಗಾಗಿ ಈ ಕೆಳಕಂಡ ಸ್ಥಿರಾಸ್ತಿಗಳನ್ನು ಉಲ್ಲೇಖ (1)ರ ಪ್ರಕರಣದ ರೀತ್ಯಾ ತೀರ್ಪು ಮುನ್ನ ಜಪ್ತಿ ಆಜ್ಞೆಯನ್ನು ಹೊರಡಿಸಿ, ಆದೇಶಿಸಲಾಗಿತ್ತು.

| ಕ್ರಮ ಸಂಖ್ಯೆ | ಹೆಸರು | ಗ್ರಾಮ | ಹೋಬಳಿ | ಸರ್ವೆ ನಂಬರ್ | ವಿಸ್ತೀರ್ಣ ಎಕರೆ/ಗುಂಟೆ |
|---|---|---|---|---|---|
| 1 | ಹೆಚ್.ಎನ್. ಗಾಯತ್ರಿದೇವಿ ಕೋಂ ಲೇಟ್ ಹೆಚ್. ಆರ್. ನರಸಿಂಹಮೂರ್ತಿ | ಸಬ್ಬೇನಹಳ್ಳಿ ಚಿ.ನಾ. ಹಳ್ಳಿ, ತಾ|| | ಹಂದನಕೆರೆ ಹೋಬಳಿ ಚಿ.ನಾ. ಹಳ್ಳಿ, ತಾ|| | 108 | 10-00 |
| 2 | ಹೆಚ್.ಎಸ್. ರಾಮರಾವ್ ಬಿನ್ ಸೂರಪ್ಪ | ಹಂದನಕೆರೆ | ಹಂದನಕೆರೆ ಚಿ.ನಾ. ಹಳ್ಳಿ, ತಾ|| | 126 | 2-35 |
| | ಹೆಚ್.ಎಸ್. ರಾಮರಾವ್ ಬಿನ್ ಸೂರಪ್ಪ | ಹಂದನಕೆರೆ | ಹಂದನಕೆರೆ ಚಿ.ನಾ. ಹಳ್ಳಿ, ತಾ|| | 125 | 1-04 |

| ಕ್ರಮ ಸಂಖ್ಯೆ | ಹೆಸರು | ಗ್ರಾಮ | ಹೋಬಳಿ | ಸರ್ವೆ ನಂಬರ್ | ವಿಸ್ತೀರ್ಣ ಎಕರೆ/ಗುಂಟೆ |
|---|---|---|---|---|---|
| 3 | ಹೆಚ್.ಎಸ್. ರಾಮರಾವ್ ಬಿನ್ ಸೂರಪ್ಪ | ಹಂದನಕೆರೆ | ಹಂದನಕೆರೆ ಚಿ.ನಾ. ಹಳ್ಳಿ, ತಾ|| | 124 | 1–30 |
| | ಹೆಚ್.ಎಸ್. ರಾಮರಾವ್ ಬಿನ್ ಸೂರಪ್ಪ | ಹಂದನಕೆರೆ | ಹಂದನಕೆರೆ ಚಿ.ನಾ. ಹಳ್ಳಿ, ತಾ|| | 124 | 2–21 |
| 4 | ಹೆಚ್.ಎಸ್. ರಾಮರಾವ್ ಬಿನ್ ಸೂರಪ್ಪ | ಹಂದನಕೆರೆ | ಹಂದನಕೆರೆ ಚಿ.ನಾ. ಹಳ್ಳಿ, ತಾ|| | 124 | 1–30 |

ಆದರೆ ಹೆಚ್. ಆರ್. ನರಸಿಂಹಮೂರ್ತಿ ಇವರು ಸಂಘದಲ್ಲಿ ಮಾಡಿರುವ ದುರುಪಯೋಗದ ಮೊತ್ತ ರೂ. 2,93,969.80 ಗಳನ್ನು ಚಲನ್ ನಂ.1 ರಲ್ಲಿ ಹಾಗೂ ಅಮಲ್ಜಾರಿ ಶುಲ್ಕ ರೂ.4814.00 ಗಳನ್ನು ಚಲನ್ ನಂ. 2 ರಲ್ಲಿ ದಿನಾಂಕ 14–12–2013 ರಂದು ಸಂಘಕ್ಕೆ ಪೂರಾ ಜಮಾ ಮಾಡಿರುತ್ತಾರೆಂದು ಉಲ್ಲೇಖ (2)ರ ರೀತ್ಯಾ ಸದರಿ ಸಂಘದ ಮುಖ್ಯ ಕಾರ್ಯನಿರ್ವಹಣಾಧಿಕಾರಿಯವರು ಈ ಕಚೇರಿಗೆ ವರದಿ ಮಾಡಿರುತ್ತಾರೆ. ಹೆಚ್. ಆರ್. ನರಸಿಂಹಮೂರ್ತಿ ಇವರ ವಾರಸುದಾರರಾದ ಶ್ರೀಮತಿ ಹೆಚ್.ಎನ್. ಗಾಯತ್ರಿದೇವಿ ಕೋಂ ಲೇಟ್ ಹೆಚ್.ಆರ್. ನರಸಿಂಹಮೂರ್ತಿ ಇವರು ಉಲ್ಲೇಖ (1)ರ ಆದೇಶವನ್ನು ಹಿಂಪಡೆಯಲು ಉಲ್ಲೇಖ (4)ರ ಪತ್ರದಲ್ಲಿ ಕೋರಿರುತ್ತಾರೆ.

ಆದ್ದರಿಂದ ಸದರಿಯವರಿಗೆ ಸಂಬಂಧಿಸಿದ ಸ್ಥಿರೀಕರಿಸಿರುವ ಸ್ಥಿರಾಸ್ತಿಗಳ ಆದೇಶವನ್ನು ಹಿಂಪಡೆದು ಈ ಕೆಳಗಿನಂತೆ ಆದೇಶಿಸಿದೆ.

**ಹಿಂಪಡೆದ ಆದೇಶ**

**ಸಂಖ್ಯೆ ಸನಿ–34/ಡಿಡಿಎಸ್/ಕಲಂ–103/01/2008–09, ದಿನಾಂಕ 17–12–2013**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ, ಜಿ. ಬಸಯ್ಯ, ಸಹಕಾರ ಸಂಘಗಳ ಸಹಾಯಕ ನಿಬಂಧಕರು ತಿಪಟೂರು ಉಪ ವಿಭಾಗ, ತಿಪಟೂರು ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ–103 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ : ಸಿ.ಓ/139/ಸಿಎಲ್‌ಎಂ/2010. ಬೆಂಗಳೂರು, ದಿನಾಂಕ 17–2–2011 ರ ರೀತ್ಯಾ ದತ್ತವಾಗಿರುವ ಅಧಿಕಾರದ ಮೇರೆಗೆ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ., ಹಂದನಕೆರೆ, ಚಿಕ್ಕನಾಯಕನಹಳ್ಳಿ ತಾಲ್ಲೂಕು, ಈ ಸಂಘದಲ್ಲಿ ಶ್ರೀ ಹೆಚ್.ಆರ್. ನರಸಿಂಹಮೂರ್ತಿ ಮಾಜಿ, ವ್ಯವಸ್ಥಾಪಕರು ಇವರು ದುರುಪಯೋಗಪಡಿಸಿಕೊಂಡಿರುವ ಹಣ ರೂ. 2,93,969.80 ಗಳನ್ನು ದಿನಾಂಕ 14–12–2013 ರಂದು ಸಂಘಕ್ಕೆ ಜಮಾ ಮಾಡಿರುವುದರಿಂದ ಉಲ್ಲೇಖ (1)ರ ದಿನಾಂಕ 17–7–2009 ರಂದು ನೀಡಿದ ಆದೇಶವನ್ನು ಹಿಂಪಡೆದು ಹೆಚ್.ಆರ್. ನರಸಿಂಹಮೂರ್ತಿ ಇವರ ಹೆಸರಿಗೆ ಈ ಕೆಳಕಂಡ ಸ್ಥಿರಾಸ್ತಿಗಳನ್ನು ಪುನರ್ ವರ್ಗಾವಣೆ ಮಾಡಿ ಆದೇಶಿಸಿದೆ.

**ಸ್ಥಿರಾಸ್ತಿಯ ವಿವರ**

| ಕ್ರಮ ಸಂಖ್ಯೆ | ಹೆಸರು | ಗ್ರಾಮ | ಹೋಬಳಿ | ಸರ್ವೆ ನಂಬರ್ | ವಿಸ್ತೀರ್ಣ ಎಕರೆ/ಗುಂಟೆ |
|---|---|---|---|---|---|
| 1 | ಹೆಚ್.ಎನ್. ಗಾಯತ್ರಿದೇವಿ ಕೋಂ ಲೇಟ್ ಹೆಚ್. ಆರ್. ನರಸಿಂಹಮೂರ್ತಿ | ಸಬ್ಬೇನಹಳ್ಳಿ ಚಿ.ನಾ. ಹಳ್ಳಿ, ತಾ|| | ಹಂದನಕೆರೆ ಹೋಬಳಿ ಚಿ.ನಾ. ಹಳ್ಳಿ, ತಾ|| | 108 | 10–00 |
| 2 | ಹೆಚ್.ಎಸ್. ರಾಮರಾವ್ ಬಿನ್ ಸೂರಪ್ಪ | ಹಂದನಕೆರೆ | ಹಂದನಕೆರೆ ಚಿ.ನಾ. ಹಳ್ಳಿ, ತಾ|| | 126 | 2–35 |
| | ಹೆಚ್.ಎಸ್. ರಾಮರಾವ್ ಬಿನ್ ಸೂರಪ್ಪ | ಹಂದನಕೆರೆ | ಹಂದನಕೆರೆ ಚಿ.ನಾ. ಹಳ್ಳಿ, ತಾ|| | 125 | 1–04 |
| 3 | ಹೆಚ್.ಎಸ್. ರಾಮರಾವ್ ಬಿನ್ ಸೂರಪ್ಪ | ಹಂದನಕೆರೆ | ಹಂದನಕೆರೆ ಚಿ.ನಾ. ಹಳ್ಳಿ, ತಾ|| | 124 | 1–30 |
| | ಹೆಚ್.ಎಸ್. ರಾಮರಾವ್ ಬಿನ್ ಸೂರಪ್ಪ | ಹಂದನಕೆರೆ | ಹಂದನಕೆರೆ ಚಿ.ನಾ. ಹಳ್ಳಿ, ತಾ|| | 124 | 2–21 |
| 4 | ಹೆಚ್.ಎಸ್. ರಾಮರಾವ್ ಬಿನ್ ಸೂರಪ್ಪ | ಹಂದನಕೆರೆ | ಹಂದನಕೆರೆ ಚಿ.ನಾ. ಹಳ್ಳಿ, ತಾ|| | 124 | 1–30 |

ಈ ಆದೇಶವನ್ನು ನನ್ನ ಸಹಿ ಹಾಗೂ ಈ ಕಚೇರಿ ಮುದ್ರೆಯೊಂದಿಗೆ ದಿನಾಂಕ 17–12–2013 ರಂದು ನೀಡಿದೆ.

**ಜಿ. ಬಸಯ್ಯ,**
ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ತಿಪಟೂರು ಉಪ ವಿಭಾಗ, ತಿಪಟೂರು.

PR. 29
SC. 15

**ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಉಪಧನ ಪಾವತಿ ಕಾಯ್ದೆಯಡಿ**

**ನಿಯಂತ್ರಣಾಧಿಕಾರಿಯವರ ನ್ಯಾಯಾಲಯ, ವಿಭಾಗ-2, ಬೆಂಗಳೂರು**

**ಸಂಖ್ಯೆ : ಪಿಜಿಎ/ಎಸ್.ಆರ್. 149/2013, ದಿನಾಂಕ 20-12-2013**

| **ಅರ್ಜಿದಾರರು :** | **ವಿರುದ್ಧ ಪ್ರತಿವಾದಿಗಳು :** |
|---|---|
| ಶ್ರೀಮತಿ ಟಿ. ಸುನಂದ | ಕರ್ನಾಟಕ ವಿದ್ಯುತ್ ಕಾರ್ಖಾನೆ ನಿಯಮಿತ |
| ನಂ. 3462, ಕೋಟೆ ಬೀದಿ | ಅಂಚೆ ಪೆಟ್ಟಿಗೆ ಸಂಖ್ಯೆ 2610 |
| ನೆಲಮಂಗಲ ತಾಲ್ಲೂಕು | ಮೈಸೂರು ರಸ್ತೆ, |
| ಬೆಂಗಳೂರು ಗ್ರಾಮಾಂತರ-562123. | ಬೆಂಗಳೂರು-560026 |

**ಪ್ರಕಟಣೆ**

ಸಾರ್ವಜನಿಕರಿಗೆ ಹಾಗೂ ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಆಡಳಿತ ವರ್ಗದವರು ಈ ನ್ಯಾಯಾಲಯದಲ್ಲಿ ದಿನಾಂಕ 16-11-2013 ರಂದು ಉಪಧನ ಪಾವತಿ ಕಾಯ್ದೆಯಡಿಯಲ್ಲಿ ಅರ್ಜಿಯನ್ನು ಸಲ್ಲಿಸಿ, ಅರ್ಜಿಯಲ್ಲಿ ಶ್ರೀ ಟಿ. ರಮೇಶ್ ಇವರು ತಮ್ಮ ಕಾರ್ಮಿಕರೆಂದು, ಇವರು ದಿನಾಂಕ 07-08-2013 ರಂದು ಮರಣ ಹೊಂದಿರುತ್ತಾರೆಂದು ತಿಳಿಸಿ, ಉಪಧನದ ಮೊತ್ತ ರೂ. 179,325/- ಗಳನ್ನು ಈ ನ್ಯಾಯಾಲಯದಲ್ಲಿ ಠೇವಣಿಗೊಳಿಸಿ, ದಿ. ಶ್ರೀ ಟಿ. ರಮೇಶ್‌ರವರು ದಿನಾಂಕ 21-7-1997 ರಲ್ಲಿ ನೀಡಿದ ನಾಮನಿರ್ದೇಶನದಲ್ಲಿ ಅವರ ತಾಯಿಯಾದ ಶ್ರೀಮತಿ ಎಂ.ವಿ. ರತ್ನಮ್ಮರವರಿಗೆ 50% ಮತ್ತು ಅವರ ಧರ್ಮ ಪತ್ನಿಯಾದ ಶ್ರೀಮತಿ ರಾಮಲಕ್ಷ್ಮಿ ರವರಿಗೆ 50% ಗ್ರಾಜುಟಿ ನಾಮನಿರ್ದೇಶನ ನೀಡಲಾಗಿತ್ತೆಂದು, ಅವರ ತಾಯಿ ಎಂ.ವಿ. ರತ್ನಮ್ಮ ಮರಣ ಹೊಂದಿದ್ದು ಪತ್ನಿಯಾದ ಶ್ರೀಮತಿ ರಾಮಲಕ್ಷ್ಮಿ ವಿವಾಹ ವಿಚ್ಛೇದನ ನೀಡಿದ್ದು, ನಂತರ ಶ್ರೀ ಟಿ. ರಮೇಶ್‌ರವರು ನಾಮ ನಿರ್ದೇಶನವನ್ನು ಅವರ ಸಹೋದರಿಯಾದ ಟಿ. ಸುನಂದರವರಿಗೆ ನಾಮನಿರ್ದೇಶನ ಮಾಡಿದ್ದು, ನಾಮನಿರ್ದೇಶನದ ದಿನಾಂಕವನ್ನು ನಮೂದಿಸಿರುವುದಿಲ್ಲವೆಂದು ತಿಳಿಸಿರುತ್ತಾರೆ.

ಶ್ರೀಮತಿ ಟಿ. ಸುನಂದರವರು ದಿನಾಂಕ 4-9-13 ರಂದು ತನ್ನ ಅಣ್ಣನಾದ ಲೇಟ್ ಟಿ. ರಮೇಶ್‌ರವರ ಗ್ರಾಜುಟಿ ಹಣವನ್ನು ನೀಡಬೇಕೆಂದು ಕೋರಿರುತ್ತಾರೆ. ಆದ್ದರಿಂದ, ಈ ಬಗ್ಗೆ ಆದೇಶ ಹೊರಡಿಸಬೇಕಾಗಿರುವುದರಿಂದ ಮೇಲೆ ಸೂಚಿಸಿರುವ ಅರ್ಜಿಯನ್ನು ಹೊರತುಪಡಿಸಿ (ಜೀವಂತ ಸದಸ್ಯರು) ಬೇರೆ ಯಾರಾದರೂ ಸದರಿ ಕಾರ್ಮಿಕರಿಗೆ ಸಂಬಂಧಿಸಿದ ಶಾಸನಬದ್ಧ ವಾರಸುದಾರರು/ಉತ್ತರಾಧಿಕಾರಿ ಎಂದು ಪರಿಗಣಿಸಲು ಪ್ರಾರ್ಥಿಸುವುದಾದಲ್ಲಿ ಅಂತಹವರು ಈ ಪ್ರಕಟಣೆಯನ್ನು ರಾಜ್ಯ ಪತ್ರದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳನ್ನಾಗಲೀ ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದೆಂದು ಈ ಮೂಲಕ ಸೂಚಿಸಲಾಗಿದೆ.

ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಎ.ಎಚ್. ಉಮೇಶ,**
ಸಹಾಯಕ ಕಾರ್ಮಿಕ ಆಯುಕ್ತರು,
ಮತ್ತು ಉಪಧನ ನಿಯಂತ್ರಣಾಧಿಕಾರಿ
ಬೆಂಗಳೂರು ವಿಭಾಗ-2, ಬೆಂಗಳೂರು

**PR. 31**

**ಕಂದಾಯ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಕಂಇ 19 ಎಲ್‌ಆರ್‌ಎಂ:2013, ಬೆಂಗಳೂರು, ದಿನಾಂಕ: 27-12-2013.**

**ಮೆ॥ ಗುಜರಾತ್ ಅಂಬುಜಾ ಎಕ್ಸ್‌ಪೋರ್ಟ್ಸ್ ಲಿ., ಅಹಮದಾಬಾದ** ಇವರು ಹಾವೇರಿ ಜಿಲ್ಲೆ ಶಿಗ್ಗಾಂವ ತಾಲ್ಲೂಕ, ಹುಲಸೋಗಿ ಗ್ರಾಮದ ರಿ.ಸ.ನಂ. 157/4 ಕ್ಷೇತ್ರ 5ಎ-31 ಗುಂಟೆ ಹಾಗೂ ರಿ.ಸ.ನಂ. 200/1ಅ/2 ಕ್ಷೇತ್ರ 03 ಎಕರೆ 35 ಗುಂಟೆ ಒಟ್ಟು ಕ್ಷೇತ್ರ 09 ಎಕರೆ 26 ಗುಂಟೆ ಜಮೀನನ್ನು ಪತ್ರ ಸಂಖ್ಯೆ: ಭೂಸು (109) ವಹಿ:3:2010-11, ದಿನಾಂಕ: 14-05-2013ರಲ್ಲಿ ಕೈಗಾರಿಕಾ ಉದ್ದೇಶಕ್ಕಾಗಿ ಮೇಜ ಸ್ಟಾರ್ಚ್ ಅಲೈಡ್ ಪ್ರಾಡಕ್ಟ್ಸ್ ಯೋಜನೆಗೆ ಖರೀದಿಸಲು ಅನುಮತಿ ನೀಡುವಂತೆ ಶಿಫಾರಸ್ಸು ಮಾಡಿ, ಜಿಲ್ಲಾಧಿಕಾರಿ, ಹಾವೇರಿ ಇವರು ಪ್ರಸ್ತಾವನೆ ಸಲ್ಲಿಸಿದ್ದರು. ಈ ಪ್ರಸ್ತಾವನೆಯನ್ನು ಪರಿಶೀಲಿಸಿ, ಕರ್ನಾಟಕ ಭೂ ಸುಧಾರಣಾ ಅಧಿನಿಯಮ 1961 ರ ಕಲಂ 109(1) ಮತ್ತು ಕರ್ನಾಟಕ ಭೂ ಸುಧಾರಣಾ ನಿಯಮಗಳು 1974ರ ನಿಯಮ 38-ಬಿ ಮತ್ತು 38-ಸಿ ರಲ್ಲಿನ ಷರತ್ತುಗಳನ್ನು ಪೂರೈಸಿರುವುದರಿಂದ, ಕರ್ನಾಟಕ ಭೂ ಸುಧಾರಣೆ ಅಧಿನಿಯಮ 1961ರ ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯಿತಿ ನೀಡಿ, ಕಲಂ 109 (1)ರಡಿ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಸರ್ಕಾರದ ಅನುಮತಿ ನೀಡಲಾಗಿದೆ:-

1) ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸಂಬಂಧಪಟ್ಟ ಜಮೀನನ್ನು ಎರಡು ವರ್ಷದೊಳಗೆ ಉಪಯೋಗಿಸತಕ್ಕದ್ದು ಮತ್ತು ಈ ಕುರಿತಂತೆ ಸಂಬಂಧಪಟ್ಟ ಜಿಲ್ಲಾಧಿಕಾರಿಗಳ ಮುಖಾಂತರ ಸರ್ಕಾರಕ್ಕೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.

2) ಈ ಅನುಮತಿಯು ಕರ್ನಾಟಕ ಭೂಸುಧಾರಣೆ ಅಧಿನಿಯಮ (1961)ದ ಕಲಂ 109ರನ್ವಯ ವಿನಾಯಿತಿ ಮಾತ್ರವಾಗಿದ್ದು, ಬೇರೆ ಕಾನೂನುಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

3) ಈ ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ, ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ, 1956ರ ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 51 ಪೇಯ್ಡ್ ಅಪ್ ಷೇರು ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ನಿಯಂತ್ರಿತ ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರದ ಸಂಘ/ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.

4) ಸದರಿ ಜಮೀನನ್ನು ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಕರ್ನಾಟಕ ಭೂ ಕಂದಾಯ ಅಧಿನಿಯಮ (1964)ದ ಕಲಂ 95ರ ಮೇರೆಗೆ ಸಂಬಂಧಪಟ್ಟ ಜಿಲ್ಲಾಧಿಕಾರಿಯವರಿಂದ ಅನುಮತಿ ಪಡೆಯತಕ್ಕದ್ದು.

5) ಉಲ್ಲೇಖಿತ ಜಮೀನುಗಳಲ್ಲಿ ಯಾವುದೇ ಅಭಿವೃದ್ಧಿ ಕಾರ್ಯ ಕೈಗೊಳ್ಳುವ ಮೊದಲು ಜಮೀನಿನ ವಿನ್ಯಾಸಕ್ಕೆ ನಗರ ಯೋಜನಾ ಇಲಾಖೆ/ಅಭಿವೃದ್ಧಿ ಪ್ರಾಧಿಕಾರ/ಸ್ಥಳೀಯ ಪ್ರಾಧಿಕಾರಗಳಿಂದ ಅಥವಾ ಸಂಬಂಧಪಟ್ಟ ಸಕ್ಷಮ ಪ್ರಾಧಿಕಾರಿಗಳಿಂದ ಅನುಮೋದನೆ ಪಡೆಯತಕ್ಕದ್ದು.

6) ಆ ಜಮೀನು ಯಾವುದೇ ನಗರಾಭಿವೃದ್ಧಿ ಪ್ರಾಧಿಕಾರದ ಸಿ.ಡಿ.ಪಿ/ಒ.ಡಿ.ಪಿ. ವ್ಯಾಪ್ತಿಯೊಳಗೆ ಬಂದಲ್ಲಿ ಸಂಬಂಧಪಟ್ಟ ಪ್ರಾಧಿಕಾರದ ಅನುಮತಿ ಪಡೆಯತಕ್ಕದ್ದು.

7) ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969 ರಂತೆ ಮಂಜೂರು ಮಾಡಬೇಕಾದಂತಹ ಯಾವುದೇ ಸರ್ಕಾರಿ ಜಮೀನುಗಳು ಇದ್ದಲ್ಲಿ ಅದನ್ನು ಹೊರತುಪಡಿಸಲಾಗಿದೆ.

8) ಸಂಸ್ಥೆ ನಡೆಸುವ ಚಟುವಟಿಕೆಗಳು ಸ್ಥಳೀಯ ಕಾನೂನು, ಕರ್ನಾಟಕ ಮತ್ತು ಭಾರತ ಸರ್ಕಾರದ ಕಾನೂನುಗಳನ್ನು ಪಾಲಿಸತಕ್ಕದ್ದು.

ಈ ಮೇಲಿನ ಯಾವುದೇ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯ ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಿಕೊಳ್ಳಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಎಂ. ದಾಕ್ಷಾಯಣಮ್ಮ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂ ಸುಧಾರಣೆ).

**P.R. 33**
**SC 14**

## ಕಂದಾಯ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಕಂಇ 06 ಎಲ್‌ಆರ್‌ಎಂ 2013, ಬೆಂಗಳೂರು, ದಿನಾಂಕ: 26–12–2013.**

**ಶ್ರೀ ಶಂಕರಲಿಂಗ ಪ್ರೌಢಶಾಲೆ ಹೊಂಬಳ,** ಇವರು ಗದಗ ತಾಲ್ಲೂಕು, ಹೊಂಬಳ ಗ್ರಾಮದ ಸ.ನಂ. 4ರಲ್ಲಿ ಒಟ್ಟು 3–00 ಎಕರೆ ಜಮೀನನ್ನು ಆಟದ ಮೈದಾನ ಹಾಗೂ ಕಟ್ಟಡ ನಿರ್ಮಿಸುವ ಉದ್ದೇಶಕ್ಕಾಗಿ ಖರೀದಿಸಲು ಕರ್ನಾಟಕ ಭೂ ಸುಧಾರಣಾ ಅಧಿನಿಯಮ 1961ರ ಕಲಂ 109(1)ರಡಿ ದಿನಾಂಕ: 23–01–2004ರಂದು ಜಿಲ್ಲಾಧಿಕಾರಿ, ಗದಗ ಇವರು ಅನುಮತಿ ನೀಡಿ ಆದೇಶಿಸಿರುತ್ತಾರೆ.

ಸದರಿ ಸಂಸ್ಥೆಯು ಕರ್ನಾಟಕ ಭೂ ಸುಧಾರಣಾ ನಿಯಮಗಳು 1974ರ ನಿಯಮ 38(ಡಿ) ರನ್ವಯ ನಿಗದಿತ ಕಾಲಾವಧಿಯಲ್ಲಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕೆ ಬಳಸಿಕೊಂಡಿಲ್ಲವಾದ್ದರಿಂದ ಸುತ್ತೋಲೆ ಸಂಖ್ಯೆ: ಕಂಇ 69 ಎಲ್‌ಆರ್‌ಎಂ 2007, ದಿನಾಂಕ: 26–03–2008ರನ್ವಯ ಪ್ರಸ್ತಾವನೆಯನ್ನು ಜಿಲ್ಲಾಧಿಕಾರಿಗಳು, ಗದಗ ಜಿಲ್ಲೆ ಇವರು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಆದ್ದರಿಂದ ಶ್ರೀ ಶಂಕರಲಿಂಗ ಪ್ರೌಢಶಾಲೆ ಹೊಂಬಳ, ಇವರು ಗದಗ ತಾಲ್ಲೂಕು ಹೊಂಬಳ ಗ್ರಾಮದ ಸ.ನಂ. 4ರಲ್ಲಿ ಒಟ್ಟು 3–00 ಎಕರೆ ಜಮೀನನ್ನು ಆಟದ ಮೈದಾನ ಹಾಗೂ ಕಟ್ಟಡ ನಿರ್ಮಿಸುವ ಉದ್ದೇಶಕ್ಕಾಗಿ ಈಗಾಗಲೇ ಖರೀದಿಸಿದ್ದು, ಇವರಿಗೆ ಕರ್ನಾಟಕ ಭೂ ಸುಧಾರಣಾ ಅಧಿನಿಯಮ 1961ರ ಕಲಂ 109 (i) (ii) ರಂತೆ ಕೆಳಕಂಡ ಷರತ್ತುಗಳನ್ನು ವಿಧಿಸಿ ಮತ್ತೊಮ್ಮೆ ಅನುಮತಿ ನೀಡಿ, ಆದೇಶಿಸಿದೆ.

1) ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸಂಬಂಧಪಟ್ಟ ಜಮೀನನ್ನು ಎರಡು ವರ್ಷದೊಳಗೆ ಉಪಯೋಗಿಸತಕ್ಕದ್ದು ಮತ್ತು ಈ ಕುರಿತಂತೆ ಸಂಬಂಧಪಟ್ಟ ಜಿಲ್ಲಾಧಿಕಾರಿಗಳ ಮುಖಾಂತರ ಸರ್ಕಾರಕ್ಕೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.

2) ಈ ಅನುಮತಿಯು ಕರ್ನಾಟಕ ಭೂಸುಧಾರಣೆ ಅಧಿನಿಯಮ (1961)ದ ಕಲಂ 109ರನ್ವಯ ವಿನಾಯಿತಿ ಮಾತ್ರವಾಗಿದ್ದು, ಬೇರೆ ಕಾನೂನುಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

3) ಈ ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ, ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ, 1956ರ ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 51 ಪೇಯ್ಡ್ ಅಪ್ ಷೇರು ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ನಿಯಂತ್ರಿತ ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರದ ಸಂಘ/ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.

4) ಸದರಿ ಜಮೀನನ್ನು ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಕರ್ನಾಟಕ ಭೂ ಕಂದಾಯ ಅಧಿನಿಯಮ (1964)ದ ಕಲಂ 95ರ ಮೇರೆಗೆ ಸಂಬಂಧಪಟ್ಟ ಜಿಲ್ಲಾಧಿಕಾರಿಯವರಿಂದ ಅನುಮತಿ ಪಡೆಯತಕ್ಕದ್ದು.

5) ಉಲ್ಲೇಖಿತ ಜಮೀನುಗಳಲ್ಲಿ ಯಾವುದೇ ಅಭಿವೃದ್ಧಿ ಕಾರ್ಯ ಕೈಗೊಳ್ಳುವ ಮೊದಲು ಜಮೀನಿನ ವಿನ್ಯಾಸಕ್ಕೆ ನಗರ ಯೋಜನಾ ಇಲಾಖೆ/ಅಭಿವೃದ್ಧಿ ಪ್ರಾಧಿಕಾರ/ಸ್ಥಳೀಯ ಪ್ರಾಧಿಕಾರಗಳಿಂದ ಅಥವಾ ಸಂಬಂಧಪಟ್ಟ ಸಕ್ಷಮ ಪ್ರಾಧಿಕಾರಿಗಳಿಂದ ಅನುಮೋದನೆ ಪಡೆಯತಕ್ಕದ್ದು.

6) ಆ ಜಮೀನು ಯಾವುದೇ ನಗರಾಭಿವೃದ್ಧಿ ಪ್ರಾಧಿಕಾರದ ಸಿ.ಡಿ.ಪಿ/ಒ.ಡಿ.ಪಿ. ವ್ಯಾಪ್ತಿಯೊಳಗೆ ಬಂದಲ್ಲಿ ಸಂಬಂಧಪಟ್ಟ ಪ್ರಾಧಿಕಾರದ ಅನುಮತಿ ಪಡೆಯತಕ್ಕದ್ದು.

7) ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969 ರಂತೆ ಮಂಜೂರು ಮಾಡಬೇಕಾದಂತಹ ಯಾವುದೇ ಸರ್ಕಾರಿ ಜಮೀನುಗಳು ಇದ್ದಲ್ಲಿ ಹೊರತುಪಡಿಸಲಾಗಿದೆ.

8) ಸಂಸ್ಥೆ ನಡೆಸುವ ಚಟುವಟಿಕೆಗಳು ಸ್ಥಳೀಯ ಕಾನೂನು, ಕರ್ನಾಟಕ ಮತ್ತು ಭಾರತ ಸರ್ಕಾರದ ಕಾನೂನುಗಳನ್ನು ಪಾಲಿಸತಕ್ಕದ್ದು.

ಈ ಮೇಲಿನ ಯಾವುದೇ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯ ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಿಕೊಳ್ಳಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಎಂ. ದಾಕ್ಷಾಯಣಮ್ಮ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂ ಸುಧಾರಣೆ).

P.R. 34
SC 20

## ಜಿಲ್ಲಾ ಅಧಿಕಾರಿಗಳ ಕಛೇರಿ, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ

## ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು

## ಪ್ರಕಟಣೆ

**ಸಂಖ್ಯೆ: ಡಿಬಿಸಿಎಂ/ಬೆಂಗ್ರಾ/ಕಾ.ತ/ಬಿ–2/ಸಿಆರ್–31/2013–14, ದಿನಾಂಕ: 26–12–2013.**

**ವಿಷಯ :** 2013–14ನೇ ಸಾಲಿನಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಮತೀಯ ಅಲ್ಪಸಂಖ್ಯಾತರ ಕಾನೂನು ಪದವೀಧರರನ್ನು ನ್ಯಾಯಾಂಗ ಆಡಳಿತ ಹಾಗೂ ವಕೀಲ ವೃತ್ತಿಯ ತರಬೇತಿಗೆ ನಿಯೋಜಿಸಿ ಆದೇಶ ಹೊರಡಿಸುವ ಬಗ್ಗೆ

**ಉಲ್ಲೇಖ :**
1) ಸರ್ಕಾರಿ ಆದೇಶ ಸಂಖ್ಯೆ: ಎಸ್‌ಡಬ್ಲ್ಯೂಎಲ್ 68 ಎಸ್.ಇ.ಡಬ್ಲ್ಯೂ 89, ದಿನಾಂಕ: 2–11–1990
2) ಸರ್ಕಾರದ ಆದೇಶ ಸಂಖ್ಯೆ: ಸಕಇ 205 ಬಿಎಂಎಸ್ 99, ದಿನಾಂಕ: 07–10–1999
3) ಸರ್ಕಾರಿ ಆದೇಶ ಸಂಖ್ಯೆ: ಸಕಇ 446 ಬಿಎಂಎಸ್ 2005, ಬೆಂಗಳೂರು, ದಿನಾಂಕ: 01–12–2005

2013–14ನೇ ಸಾಲಿನಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಗೆ ಸೇರಿರುವ ಮತೀಯ ಅಲ್ಪಸಂಖ್ಯಾತರಾದ ಮುಸ್ಲಿಂ, ಕ್ರಿಶ್ಚಿಯನ್, ಜೈನ್, ಬೌದ್ಧರು, ಸಿಖ್ಖರು ಹಾಗೂ ಪಾರ್ಸಿ ಸಮುದಾಯಕ್ಕೆ ಸೇರಿದ ಕಾನೂನು ಪದವೀಧರರಿಂದ ನ್ಯಾಯಾಂಗ ಆಡಳಿತದಲ್ಲಿ 4 ವರ್ಷಗಳ ಅವಧಿಗೆ ತರಬೇತಿಗೆ ಅರ್ಹ ಅಭ್ಯರ್ಥಿಗಳ ಅರ್ಜಿಗಳನ್ನು ಆಹ್ವಾನಿಸಲಾಗಿದೆ. ಅಭ್ಯರ್ಥಿಗಳು ನಿಗದಿತ ಅರ್ಜಿ ನಮೂನೆಯನ್ನು ಈ ಕಛೇರಿಯಲ್ಲಿ ನಿಗದಿತ ಅವಧಿಯೊಳಗೆ ಕಛೇರಿ ವೇಳೆಯಲ್ಲಿ ಪಡೆದು ಭರ್ತಿ ಮಾಡಲಾದ ಅರ್ಜಿಗಳನ್ನು ಸದಸ್ಯ ಕಾರ್ಯದರ್ಶಿಗಳು ಹಾಗೂ ಜಿಲ್ಲಾ ಅಧಿಕಾರಿಗಳು, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ, 1ನೇ ಮಹಡಿ, ಪೋಡಿಯಂ ಬ್ಲಾಕ್, ವಿಶ್ವೇಶ್ವರಯ್ಯ ಗೋಪುರ, ಡಾ॥ ಅಂಬೇಡ್ಕರ್ ಬೀದಿ, ಬೆಂಗಳೂರು, ಇಲ್ಲಿಗೆ ದಿನಾಂಕ: 16–01–2014ರೊಳಗೆ ಸಲ್ಲಿಸುವುದು.

**ನಿಬಂಧನೆಗಳು :**

1) ಅಭ್ಯರ್ಥಿಯು ಕಾನೂನು ಪದವೀಧರರಾಗಿದ್ದು, ಈ ತರಬೇತಿಗೆ ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕಕ್ಕೆ ಅಭ್ಯರ್ಥಿಯು ಕಾನೂನು ಪದವಿಯನ್ನು ಮುಗಿಸಿ 2 (ಎರಡು) ವರ್ಷಗಳು ಮೀರಿರಬಾರದು.

2) ಅಭ್ಯರ್ಥಿಗಳು ಮತೀಯ ಅಲ್ಪಸಂಖ್ಯಾತರ ಸಮುದಾಯವಾದ ಮುಸ್ಲಿಂ, ಕ್ರಿಶ್ಚಿಯನ್, ಜೈನ್, ಸಿಖ್ಖರು, ಪಾರ್ಸಿ ಹಾಗೂ ಬೌದ್ಧರು ಇವುಗಳಿಗೆ ಸೇರಿರಬೇಕು ಹಾಗೂ ಸರ್ಕಾರದಿಂದ ನಿಗದಿಪಡಿಸಲಾದ ಜಾತಿ ಆದಾಯ ಪರಿಶೀಲನಾ ಪ್ರಮಾಣ ಪತ್ರವನ್ನು ಅರ್ಜಿಯೊಂದಿಗೆ ಲಗತ್ತಿಸಿ ಸಲ್ಲಿಸಬೇಕು.

3) ಅಭ್ಯರ್ಥಿಗಳು ಬಾರ್ ಕೌನ್ಸಿಲ್‌ನಲ್ಲಿ ಹೆಸರನ್ನು ನೋಂದಾಯಿಸಿರಬೇಕು.

4) ಭರ್ತಿ ಮಾಡಲಾದ ಅರ್ಜಿಗಳನ್ನು ಸಲ್ಲಿಸಲು ನಿಗದಿಪಡಿಸಲಾದ ಕೊನೆಯ ದಿನಾಂಕಕ್ಕೆ ಅಭ್ಯರ್ಥಿಗಳ ವಯಸ್ಸು 30 ವರ್ಷಗಳನ್ನು ಮೀರಿರಬಾರದು.

5) ಅಭ್ಯರ್ಥಿಯ ಕೌಟುಂಬಿಕ ವಾರ್ಷಿಕ ವರಮಾನ ರೂ. 15,000/–ಕ್ಕೆ ಮೀರಿರಬಾರದು. ಆಯ್ಕೆಯಾದ ಅಭ್ಯರ್ಥಿಗಳಿಗೆ 4 ವರ್ಷಗಳ ತರಬೇತಿ ಅವಧಿ ಇದ್ದು, ಈ ಮಧ್ಯದಲ್ಲಿ ತರಬೇತಿಯನ್ನು ಬಿಡಲು ಅವಕಾಶವಿರುವುದಿಲ್ಲ. ಆದರೆ ಕೇಂದ್ರ ಸರ್ಕಾರ/ರಾಜ್ಯ ಸರ್ಕಾರದಲ್ಲಿ ನೇಮಕಾತಿ ಹೊಂದಿರುವ ಅಭ್ಯರ್ಥಿಗಳಿಗೆ ಈ ಷರತ್ತು ಅನ್ವಯಿಸುವುದಿಲ್ಲ.

6) ಆಯ್ಕೆಯಾದ ಅಭ್ಯರ್ಥಿಗಳಿಗೆ ತರಬೇತಿ ಅವಧಿಯಲ್ಲಿ ತಿಂಗಳಿಗೆ ರೂ. 1000/–ಗಳ ತರಬೇತಿ ಭತ್ಯೆಯನ್ನು ನೀಡಲಾಗುವುದು.

7) ಆಯ್ಕೆಯಾದ ಅಭ್ಯರ್ಥಿಗಳಿಗೆ ಜಿಲ್ಲಾ ಸಮಿತಿಯು ಪಬ್ಲಿಕ್ ಪ್ರಾಸಿಕ್ಯೂಟರ್/ಸರ್ಕಾರಿ ವಕೀಲರು ಅಥವಾ 20 (ಇಪ್ಪತ್ತು) ವರ್ಷಗಳಿಗಿಂತ ಹೆಚ್ಚಿನ ವರ್ಷಗಳು ವಕೀಲ ವೃತ್ತಿಯಲ್ಲಿ ಸೇವೆ ಸಲ್ಲಿಸುತ್ತಿರುವ ಹಿರಿಯ ವಕೀಲರಲ್ಲಿ ಕಾನೂನು ತರಬೇತಿ ಪಡೆಯುವ ಸಲುವಾಗಿ ತರಬೇತಿಗೆ ಕಳುಹಿಸಿ ಕೊಡಲಾಗುವುದು.

8) ಆಯ್ಕೆಯಾದ ಅಭ್ಯರ್ಥಿಯು ಈ ಇಲಾಖೆಯ ನಿಬಂಧನೆಗಳು ಹಾಗೂ ಸರ್ಕಾರದ ಆದೇಶಗಳಿಗೆ ಬದ್ದನಾಗಿರುತ್ತೇನೆಂದು ಮುಚ್ಚಳಿಕೆಯನ್ನು ಬರೆದುಕೊಡಬೇಕು.

9) ಆಯ್ಕೆಯಾದ ಅಭ್ಯರ್ಥಿಯು ಸುಳ್ಳು ಮಾಹಿತಿ/ದಾಖಲೆಗಳನ್ನು ನೀಡಿದ್ದಲ್ಲಿ ಅಥವಾ ತರಬೇತಿ ಅವಧಿಯ ಮಧ್ಯದಲ್ಲಿ ತರಬೇತಿಯಿಂದ ಬಿಟ್ಟು ಹೋದಲ್ಲಿ ಸರ್ಕಾರ ಅವರಿಗಾಗಿ ಖರ್ಚು ಮಾಡಿದ ಹಣವನ್ನು ವರ್ಷಕ್ಕೆ ಶೇ. 10ರ ಬಡ್ಡಿಯೊಂದಿಗೆ ಭೂ ಕಂದಾಯದ ಬಾಕಿ ಎಂದು ಪರಿಗಣಿಸಿ ವಸೂಲಿ ಮಾಡಲಾಗುವುದು.

10) ಹೆಚ್ಚಿನ ಮಾಹಿತಿಯನ್ನು ಅಭ್ಯರ್ಥಿಗಳು ಜಿಲ್ಲಾ ಅಧಿಕಾರಿಗಳು, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ, 1ನೇ ಮಹಡಿ, ಪೋಡಿಯಂ ಬ್ಲಾಕ್, ವಿಶ್ವೇಶ್ವರಯ್ಯ ಕೇಂದ್ರ, ಡಾ॥ ಅಂಬೇಡ್ಕರ್ ಬೀದಿ, ಬೆಂಗಳೂರು–1, ಇವರ ಕಛೇರಿಯಲ್ಲಿ ಕೆಲಸದ ವೇಳೆಯಲ್ಲಿ ಪಡೆಯಬಹುದು.

11) ಅರ್ಹ ಅಭ್ಯರ್ಥಿಗಳನ್ನು ತರಬೇತಿಗೆ ಆಯ್ಕೆ ಮಾಡಲು ಸಂದರ್ಶನದ ದಿನಾಂಕ ಹಾಗೂ ಸ್ಥಳವನ್ನು ತಿಳಿಸಲಾಗುವುದು. ಸಂದರ್ಶನಕ್ಕೆ ಅಭ್ಯರ್ಥಿಗಳು ತಮ್ಮ ಸ್ವಂತ ಖರ್ಚಿನಲ್ಲಿ ಹಾಜರಾಗತಕ್ಕದ್ದು.

12) ಅಭ್ಯರ್ಥಿಗಳು ಭರ್ತಿ ಮಾಡಲಾದ ಅರ್ಜಿಯೊಂದಿಗೆ ಅವಶ್ಯಕ ಮಾಹಿತಿಗಳಾದ ಕಾನೂನು ಪದವಿ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದ ಪ್ರಮಾಣ ಪತ್ರ ಹಾಗೂ ಅಂಕಪಟ್ಟಿಗಳ ದೃಢೀಕರಣ ಪ್ರತಿ ಹಾಗೂ ಜನ್ಮ ದಿನಾಂಕದ ಆಧಾರಕ್ಕಾಗಿ ಎಸ್.ಎಸ್.ಎಲ್.ಸಿ. ಅಂಕಪಟ್ಟಿ ಅಥವಾ ಟಿ.ಸಿ. ದೃಢೀಕೃತ ಪ್ರತಿ ಹಾಗೂ ಆಹಾರ ಪಡಿತರ ಚೀಟಿ ಅಥವಾ ತಹಶೀಲ್ದಾರ್‌ರವರಿಂದ ಪಡೆದ ವಾಸಸ್ಥಳದ ದೃಢೀಕೃತ ಪತ್ರ ಸಲ್ಲಿಸಬೇಕು.

13) ಅಪೂರ್ಣ ಮಾಹಿತಿಗಳಿಂದ ಕೂಡಿದ ಅರ್ಜಿಗಳನ್ನು ಹಾಗೂ ನಿಗದಿತ ದಿನಾಂಕ: ವೇಳೆ ಮೀರಿ ಬಂದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

14) ಅರ್ಜಿಗಳನ್ನು ಸ್ವೀಕರಿಸುವ ಕೊನೆಯ ದಿನಾಂಕ: 16–01–2014.

**ಜಿಲ್ಲಾ ಅಧಿಕಾರಿಗಳು,**
**ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ,**
**ಬೆಂಗಳೂರು (ಗ್ರಾ) ಜಿಲ್ಲೆ, ಬೆಂಗಳೂರು**

**PR 42**
**SC 05**

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ, ಶಿವಮೊಗ್ಗ ಜಿಲ್ಲೆ, ಸಹಕಾರ ಭವನ, ಶಿವಮೊಗ್ಗ

**ವಿಷಯ:** ಸಮಾಪನೆಯಲ್ಲಿರುವ **"ಅಲ್ಪಸಂಖ್ಯಾತರ ವಿವಿದೋದ್ದೇಶ ಸಹಕಾರ ಸಂಘ ನಿ," ಸಾಗರ** ಇದರ ನೋಂದಣಿ ಕ್ರಮಾಂಕ ರದ್ದುಪಡಿಸುವ ಬಗ್ಗೆ.

**ಉಲ್ಲೇಖ:**
1. ಈ ಕಛೇರಿಯ ಆದೇಶ ನಂ.ಡಿಆರ್‌ಎಸ್/ಎಲ್‌ಕ್ಯೂಡಿ/ಡಿಎಲ್‌ಎಸ್/ಸಿಆರ್–16/2011–12. ದಿನಾಂಕ: 20–09–2013.
2. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ಉಪವಿಭಾಗ ಸಾಗರರವರ ಪತ್ರ ಸಂಖ್ಯೆ:ಸನಿ–25/ಸಮಾಪನೆ/ ಸಿಆರ್– /2013–14. ದಿನಾಂಕ: 23–12–2013.
3. ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಒ 139 ಸಿಎಲ್‌ಎಂ 2011 ದಿನಾಂಕ:17–02–2011.

**ಪ್ರಸ್ತಾವನೆ:**

ಸಮಾಪನೆಯಲ್ಲಿರುವ **"ಅಲ್ಪಸಂಖ್ಯಾತರ ವಿವಿದೋದ್ದೇಶ ಸಹಕಾರ ಸಂಘ ನಿ," ಸಾಗರ** ಈ ಸಹಕಾರ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರರವರ ಆದೇಶ ನಂ:21358/1995–96 ದಿನಾಂಕ: 08–06–1995ರಂದು ನೋಂದಣಿಯಾಗಿರುತ್ತದೆ. ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕಿಗಿಂತ ಕಡಿಮೆ ವ್ಯಾಪ್ತಿಗೆ ಸೀಮಿತವಾಗಿರುತ್ತದೆ. ಸಹಕಾರ ಸಂಘವು ಉಪನಿಯಮಗಳ ಉದ್ದೇಶಗಳಿಗನುಗುಣವಾಗಿ ಕಾರ್ಯನಿರ್ವಹಿಸದೇ ಸ್ಥಗಿತಗೊಂಡ ಕಾರಣ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರರವರ ಶಿಫಾರಸ್ಸಿನ ಮೇರೆಗೆ ಉಲ್ಲೇಖ(1)ರ ಈ ಕಛೇರಿಯ ಆದೇಶದಲ್ಲಿ ಈ ಸಂಘವನ್ನು ಸಮಾಪನೆಗೊಳಿಸಲಾಗಿತ್ತು. ಉಲ್ಲೇಖ(1)ರ ಈ ಕಛೇರಿಯ ಆದೇಶದಲ್ಲಿ ಸಮಾಪನಾಧಿಕಾರಿಯಾಗಿ ನೇಮಿಸಲಾದ ಶ್ರೀ ಬಿ.ಧರ್ಮಪ್ಪ, ದ್ವಿ.ದ.ಸ., ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ಸಾಗರ, ಇವರು ದಿನಾಂಕ: 05–11–2013ರಂದು ಪ್ರಭಾರ ಪಡೆದು ಸಮಾಪನಾ ಕಾರ್ಯಕೈಗೊಂಡಿರುತ್ತಾರೆ, ದಿನಾಂಕ:27–12–2013ರಂದು ನಡೆದ ಸಮಾಪನಾಧಿಕಾರಿಯ ಅಂತಿಮ ಸಭೆಯಲ್ಲಿ ಈ ಕಚೇರಿಯ ಆದೇಶದಲ್ಲಿ ಪಡೆದ ಅನುಮೋದನೆಯಂತೆ ಸಂಘದ ಆಸ್ತಿ–ಜವಾಬ್ದಾರಿಯನ್ನು ವಿಲೇವಾರಿ ಮಾಡಿ ಆಸ್ತಿ–ಜವಾಬ್ದಾರಿ ತಃಖ್ತೆಯನ್ನು ಶೂನ್ಯಗೊಳಿಸಿರುತ್ತಾರೆ ಮತ್ತು ಸಂಘದ ನೋಂದಣಿ ಕ್ರಮಾಂಕವನ್ನು ರದ್ದುಪಡಿಸಲು ತೀರ್ಮಾನಿಸಿ, ಪ್ರಸ್ತಾವನೆಯನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರರವರಿಗೆ ಸಲ್ಲಿಸಿರುತ್ತಾರೆ. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರರವರು ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, ನೋಂದಣಿ ಕ್ರಮಾಂಕವನ್ನು ರದ್ದುಪಡಿಸಲು ಉಲ್ಲೇಖ(2)ರ ಪತ್ರದಲ್ಲಿ ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಈ ಕಚೇರಿಗೆ ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ, ದಿನಾಂಕ: 27–12–2013ರಂದು ನಡೆದ ಸಮಾಪನಾಧಿಕಾರಿಯವರು ದಿನಾಂಕ: 31–03–2011ಕ್ಕೆ ಇದ್ದಂತೆ ಸಂಘದ ಆಸ್ತಿ–ಜವಾಬ್ದಾರಿ ತಃಖ್ತೆಯಂತೆ ವಿಲೇವಾರಿ ಮಾಡಿ ನಡವಳಿ ಮಾಡಿರುತ್ತಾರೆ. ಹಾಗೂ ದಿನಾಂಕ: 27–12–2013ಕ್ಕೆ ಇದ್ದಂತೆ ಆಸ್ತಿ–ಜವಾಬ್ದಾರಿಯನ್ನು

ಶೂನ್ಯಗೊಳಿಸಿರುತ್ತಾರೆ. ದಿನಾಂಕ: 27-12-2013ರ ಸಮಾಪನಾಧಿಕಾರಿಯ ಅಂತಿಮ ಸಭೆಯ ನಿರ್ಣಯವನ್ನು ಅಂಗೀಕರಿಸಿ, ಸಹಕಾರ ಸಂಘದ ಆಸ್ತಿ-ಜವಾಬ್ದಾರಿಗಳು ಶೂನ್ಯಗೊಳಿಸಿರುವ ಮೇರೆಗೆ ಸಂಘವನ್ನು ಮುಂದುವರೆಸುವುದರಿಂದ ಈ ಸಹಕಾರ ಸಂಘದಿಂದ ಸದಸ್ಯರಿಗಾಗಲಿ ಸಾರ್ವಜನಿಕರಿಗಾಗಲಿ ಯಾವುದೇ ಪ್ರಯೋಜನವಿಲ್ಲ ಎಂಬುದನ್ನು ಮನಗಂಡು ಈ ಸಂಘದ ನೋಂದಣಿ ಕ್ರಮಾಂಕವನ್ನು ರದ್ದುಪಡಿಸುವುದು ಸೂಕ್ತವೆಂದು ಪರಿಗಣಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ ನಂ: ಡಿಆರ್‌ಎಸ್/ಎಲ್‌ಕ್ಯೂಡಿ/ಡಿಎಲ್‌ಎಸ್/ಸಿಆರ್-16/2013-14, ದಿನಾಂಕ: 31-12-2013.**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂ:ಸಿಒ 139 ಸಿಎಲ್‌ಎಂ:2011 ದಿನಾಂಕ:17-02-2011ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ **ಎಸ್.ಹೆಚ್.ಸಂತೋಷ ಕುಮಾರ್ ಕೆ.ಸಿ.ಎಸ್., ಸಹಕಾರ ಸಂಘಗಳ ಉಪ ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ** ಆದ ನಾನು ಸಮಾಪನೆಯಲ್ಲಿರುವ **"ಅಲ್ಪಸಂಖ್ಯಾತರ ವಿವಿದ್ದೋದ್ದೇಶ ಸಹಕಾರ ಸಂಘ ನಿ," ಸಾಗರ** ಈ ಸಹಕಾರ ಸಂಘದ ನೋಂದಣಿ ನಂ:21358/1955-96 ದಿನಾಂಕ:08-01-1956ನ್ನು ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿ, ಆದೇಶ ಹೊರಡಿಸಿರುತ್ತೇನೆ.

ಈ ಆದೇಶದ ದಿನಾಂಕದಿಂದ ಸಂಘವು ಸಂಪೂರ್ಣವಾಗಿ ತನ್ನ ಅಸ್ತಿತ್ವವನ್ನು ಕಳೆದುಕೊಂಡು ವಿಸರ್ಜಿತವಾಗಿದೆ ಎಂದು ಪರಿಗಣಿಸತಕ್ಕದ್ದು. ಈ ಸಹಕಾರ ಸಂಘಕ್ಕೆ ಸಂಬಂಧಿಸಿದ ದಾಖಲಾತಿಗಳನ್ನು ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 33ರನ್ವಯ 3 ವರ್ಷಗಳ ಕಾಲ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ಉಪವಿಭಾಗ ಸಾಗರ ಇವರ ಕಾರ್ಯಾಲಯದಲ್ಲಿ ಕಾಯ್ದಿರಿಸತಕ್ಕದ್ದು.

ಈ ಆದೇಶವನ್ನು ನನ್ನ ಸಹಿ ಮತ್ತು ಕಛೇರಿ ಮೊಹರಿನೊಂದಿಗೆ ದಿನಾಂಕ:31-12-2013 ರಂದು ನೀಡಲಾಗಿದೆ.

**ಎಸ್.ಹೆಚ್.ಸಂತೋಷ ಕುಮಾರ್**
ಸಹಕಾರ ಸಂಘಗಳ ಉಪ ನಿಬಂಧಕರು,
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

**PR: 51**
**S.C.10**

**ಕಂದಾಯ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ : ಆರ್‌ಡಿ 185 ಎಲ್‌ಜಿಎ 2012, ಬೆಂಗಳೂರು, ದಿನಾಂಕ: 08ನೇ ಜನವರಿ, 2014**

**ನಮೂನೆ 29**

**68ನೇ ಪ್ರಕರಣದ (5)ನೇ ಉಪ-ಪ್ರಕರಣದ ಮೇರೆಗಿನ ಘೋಷಣೆ – ನಿಯಮ 96**

ಕರ್ನಾಟಕ ಭೂ ಕಂದಾಯ ಅಧಿನಿಯಮ 1964ರ 68ನೇ ಪ್ರಕರಣದ 5ನೇ ಉಪ ಪ್ರಕರಣದಿಂದ ಪ್ರದತ್ತವಾದ ಅಧಿಕಾರ ಚಲಾಯಿಸಿ, ಸದರಿ ಪ್ರಕರಣದ (1)ನೇ ಉಪ ಪ್ರಕರಣದ ಮೇರೆಗೆ ಹೊರಡಿಸಿದ ದಿನಾಂಕ: 11-06-2009ರಂದು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಂಡ ಎಲ್‌ಎನ್‌ಡಿ.ಪಿಡಿಆರ್:203/2009-10, ದಿನಾಂಕ: 11-01-2012 ಕ್ರಮ ಸಂಖ್ಯೆ ಅಧಿಸೂಚನೆಯ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಮತ್ತು ಕೆಳಗಿನ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಸಾರ್ವಜನಿಕ ರಸ್ತೆ ಪೊರಂಬೋಕು ಭಾಗವು ಸಾರ್ವಜನಿಕರ ಉಪಯೋಗಕ್ಕೆ ಅಗತ್ಯವಿಲ್ಲವೆಂದು ವ್ಯವಹರಣೆಗಳ ದಾಖಲೆಗಳನ್ನು ಮತ್ತು ವರದಿಯನ್ನು ರಾಜ್ಯ ಸರ್ಕಾರವು ಪರಿಶೀಲಿಸಿದ ತರುವಾಯ ಸಾರ್ವಜನಿಕ ರಸ್ತೆಯ ಬೀದಿಯ/ಗಲ್ಲಿಯ/ದಾರಿಯ ಅಂತ ಭಾಗದಲ್ಲಿನ ಅಥವಾ ಅದರ ಮೇಲಣ ಸಾರ್ವಜನಿಕ ವ್ಯಕ್ತಿಗಳ ಎಲ್ಲಾ ಹಕ್ಕುಗಳು ಕೊನೆಗೊಳ್ಳತಕ್ಕದೆಂದು ಈ ಮೂಲಕ ಘೋಷಿಸಿದೆ.

**ಅನುಸೂಚಿ**

| | |
|---|---|
| ರಸ್ತೆ ಪೊರಂಬೋಕು ಭಾಗವು ಇರುವ ಗ್ರಾಮ | ಪಾದೂರು |
| ತಾಲ್ಲೂಕು | ಉಡುಪಿ |
| ಜಿಲ್ಲೆ | ಉಡುಪಿ |
| ರಸ್ತೆ ಪೊರಂಬೋಕು ಭಾಗದ ವರ್ಣನೆ | ರಸ್ತೆ ಪೊರಂಬೋಕು (ಪಹಣಿ ಪತ್ರದ ದಾಖಲೆಯಂತೆ) |
| ರಸ್ತೆ ಪೊರಂಬೋಕು ಭಾಗದ ಸರಿಸುಮಾರು ವಿಸ್ತೀರ್ಣ | ಸ.ನಂ. 104/7ರಲ್ಲಿ 0-23 ಎಕರೆ |
| **ಮೇರೆಗಳು** | |
| ಉತ್ತರ | ಸ.ನಂ. 129 |
| ಪೂರ್ವ | ಸ.ನಂ. 104/6 |
| ದಕ್ಷಿಣ | ಸ.ನಂ. 104/6 |
| ಪಶ್ಚಿಮ | ಸ.ನಂ. 104/6 |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಶಿವಪ್ರಕಾಶ,**
ಪೀಠಾಧಿಕಾರಿ(ಪ್ರ),
ಕಂದಾಯ ಇಲಾಖೆ (ಭೂ. ಮಂ-2)

**PR: 63**
**S.C.50**

## ಕಂದಾಯ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ : ಆರ್‌ಡಿ 19 ಎಲ್‌ಜಿವ್ಯೆ 2013, ಬೆಂಗಳೂರು, ದಿನಾಂಕ: 16ನೇ ಜನವರಿ, 2014**

**ನಮೂನೆ 29**

**68ನೇ ಪ್ರಕರಣದ (5)ನೇ ಉಪ–ಪ್ರಕರಣದ ಮೇರೆಗಿನ ಘೋಷಣೆ – ನಿಯಮ 96**

ಕರ್ನಾಟಕ ಭೂ ಕಂದಾಯ ಅಧಿನಿಯಮ 1964ರ 68ನೇ ಪ್ರಕರಣದ 5ನೇ ಉಪ ಪ್ರಕರಣದಿಂದ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸದರಿ ಪ್ರಕರಣದ (1)ನೇ ಉಪ ಪ್ರಕರಣದ ಮೇರೆಗೆ ಜಿಲ್ಲಾಧಿಕಾರಿಗಳು, ಮಂಡ್ಯ ಜಿಲ್ಲೆರವರು ತಮ್ಮ ನೋಟೀಸಿನ ಸಂಖ್ಯೆ: ಎಲ್.ಎನ್.ಡಿ.(1)19/2009–10, ದಿನಾಂಕ:23–02–2012ರಂತೆ ಈ ಕೆಳಕಂಡ ಸ್ವತ್ತಿನ ಭಾಗವು ಸಾರ್ವಜನಿಕರಿಗೆ ಅಗತ್ಯವಿಲ್ಲವೆಂದು ಸದರಿ ಸ್ವತ್ತಿನ ಭಾಗದಲ್ಲಿ ಸಾರ್ವಜನಿಕರ ಹಾಗೂ ಎಲ್ಲಾ ವ್ಯಕ್ತಿಗಳ ಹಕ್ಕುಗಳು ಕೊನೆಗೊಳ್ಳುತ್ತದೆಂದು ಪ್ರಕಟಣೆಯಲ್ಲಿ ಹೊರಡಿಸಿದ್ದು, 90(ತೊಂಭತ್ತು) ದಿನಗಳು ಕಳೆದರೂ, ಸದರಿ ಸ್ವತ್ತಿನ ಹಕ್ಕಿನ ಸ್ವರೂಪದ, ಪ್ರತಿಕೂಲ ಪರಿಣಾಮದ ಮತ್ತು ನಷ್ಟದ ಪರಿಹಾರದ ಕ್ಲೇಮುಗಳ ಬಗ್ಗೆ ಯಾವುದೇ ಆಕ್ಷೇಪಣೆಗಳು ಬಂದಿರುವುದಿಲ್ಲ. ಈ ಕುರಿತು ಜಿಲ್ಲಾಧಿಕಾರಿಗಳು, ಮಂಡ್ಯರವರ ವಿವರ ವರದಿಯನ್ನು ಪರಿಗಣಿಸಿ ರಾಜ್ಯ ಸರ್ಕಾರಕ್ಕೆ ಈ ಸ್ವತ್ತು ಸಾರ್ವಜನಿಕ ಉಪಯೋಗಕ್ಕೆ ಅಗತ್ಯವಿಲ್ಲವೆಂದು ಮನಗಂಡು, ಈ ಸ್ವತ್ತಿನ ಮೇಲಿನ ಎಲ್ಲಾ ಹಕ್ಕುಗಳು ಅಳಿದುಹೋಗತಕ್ಕದ್ದು ಎಂದು ಘೋಷಿಸಿದೆ ಹಾಗೂ ಈ ಸ್ವತ್ತನ್ನು ರಾಜ್ಯ ಸರ್ಕಾರವು ವಿಲೇ ಮಾಡುವ ಅಧಿಕಾರಕ್ಕೆ ಒಳಪಡುತ್ತದೆ ಎಂದು ತಿಳಿಯಪಡಿಸಿದೆ.

**ಅನುಸೂಚಿ**

| | |
|---|---|
| ಗ್ರಾಮ | ಕೆರೆಗೋಡು |
| ತಾಲ್ಲೂಕು | ಮಂಡ್ಯ |
| ಜಿಲ್ಲೆ | ಮಂಡ್ಯ |
| ರಸ್ತೆ ಮೊದಲಾದುದರ ಭಾಗದ ವರ್ಣನೆ | ಸ.ನಂ. 331, ಸರ್ಕಾರಿ ಕಟ್ಟೆ ಖರಾಬು |
| ವಿಸ್ತೀರ್ಣ | ಸ.ನಂ. 1–06 ಎಕರೆ |
| **ಮೇರೆಗಳು** | |
| ಪೂರ್ವಕ್ಕೆ | ಶ್ರೀ ಬೊಕ್ಕಪ್ಪ, ಗುರುಕಾರಯ್ಯ, ಶಿವಣ್ಣ ಬಿನ್ ದೊಡ್ಡ ತಿಮ್ಮಯ್ಯರವರ ಜಮೀನು |
| ಪಶ್ಚಿಮಕ್ಕೆ | ಸ.ನಂ. 87ರ ಉಳಿಕೆ ಜಮೀನು |
| ಉತ್ತರಕ್ಕೆ | ಸ.ನಂ. 331ರಲ್ಲಿ ಪ್ರವಾಸಿ ಮಂದಿರಕ್ಕೆ ಮಂಜೂರಾಗಿರುವ ಜಮೀನು |
| ದಕ್ಷಿಣಕ್ಕೆ | ಸ.ನಂ. 331ರಲ್ಲಿ ರಸ್ತೆಗಾಗಿ ಅಪೇಕ್ಷಿಸಿರುವ 0–05 ಗುಂಟೆ ಜಮೀನು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಶಿವಪ್ರಕಾಶ,**
ಪೀಠಾಧಿಕಾರಿ(ಪ್ರ),
ಕಂದಾಯ ಇಲಾಖೆ (ಭೂ. ಮಂ–2)

PR: 77
S.C.50

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

**ಅಧಿಸೂಚನೆ**

**ಸಂಖ್ಯೆ: ಆಕುಕ 28 ಪಿಐಎಂ 2014, ಬೆಂಗಳೂರು, ದಿನಾಂಕ 23ನೇ ಜನವರಿ, 2014.**

ಆಯುಷ್ ಇಲಾಖೆಯ ಹಿರಿಯ ವೈದ್ಯಾಧಿಕಾರಿ (ಪ್ರಕೃತಿ ಚಿಕಿತ್ಸೆ ಮತ್ತು ಯೋಗ) ವೃಂದದ ದಿನಾಂಕ:01–01–2014ರಲ್ಲಿದ್ದಂತೆ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ಇದರೊಂದಿಗೆ ಲಗತ್ತಿಸಿರುವ ಅನುಬಂಧದಲ್ಲಿರುವಂತೆ ಪ್ರಕಟಿಸಲಾಗಿದೆ. ತಾತ್ಕಾಲಿಕ ಜೇಷ್ಠತಾ ಪಟ್ಟಿಯ ಬಗ್ಗೆ ಬಾಧಿತರು ತಮ್ಮ ಆಕ್ಷೇಪಣೆಗಳೇನಾದರೂ ಇದ್ದಲ್ಲಿ, ಈ ಅಧಿಸೂಚನೆ ಹೊರಡಿಸಿದ 30 ದಿನಗಳ ಒಳಗಾಗಿ, ತಮ್ಮ ಆಕ್ಷೇಪಣೆಯನ್ನು ಪೂರಕ ದಾಖಲೆಗಳೊಂದಿಗೆ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ವಿಕಾಸ ಸೌಧ, ಬೆಂಗಳೂರು, ಇವರಿಗೆ ಸಲ್ಲಿಸತಕ್ಕದ್ದು. ನಿಗಧಿತ ಅವಧಿಯ ನಂತರ ಬರುವಂತಹ ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ.

**ಸರ್ಕಾರದ ಅಧಿಸೂಚನೆ ಸಂಖ್ಯೆ: ಆಕುಕ 28 ಪಿಐಎಂ 2014 ದಿನಾಂಕ: 23–01–2014ಕ್ಕೆ ಅನುಬಂಧ**
**ದಿನಾಂಕ: 01–01–2014ರಲ್ಲಿರುವಂತೆ ಆಯುಷ್ ಇಲಾಖೆಯ ಹಿರಿಯ ವೈದ್ಯಾಧಿಕಾರಿ (ಪ್ರಕೃತಿ ಚಿಕಿತ್ಸೆ ಮತ್ತು ಯೋಗ)**
**ವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿ.**

| ಕ್ರ. ಸಂ. | ವೈದ್ಯಾಧಿಕಾರಿಯವರ ಹೆಸರು | ನೇರ ನೇಮಕಾತಿ/ ಮುಂಬಡ್ತಿ/ಇತರೆ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ನೈಜವಾಗಿ ಮುಂಬಡ್ತಿ ಹೊಂದಿದ ದಿನಾಂಕ | ನೇಮಕಾತಿಗೆ ಜೇಷ್ಠತೆಗೆ ನೈಜವಾದ ಅರ್ಹತಾ ದಿನಾಂಕ |
|---|---|---|---|---|---|---|
| 1 | 2 | 3 | 4 | 5 | 6 | 7 |
| 1 | ಡಾ॥ವಿ.ಪಿ.ಸತೀಶ್ | ಮುಂಬಡ್ತಿ | 21–03–1959 | 30–10–1986 | 04–04–2006 | 04–04–2006 |
| 2 | ಡಾ॥ಎಸ್.ಹರಿಗಣೇಶ್ | ಮುಂಬಡ್ತಿ | 30–05–1965 | 25–01–1992 | 04–04–2006 | 04–04–2006 |
| 3 | ಡಾ॥ಜ್ಯೋತಿ ಗಣಪತಿ ಭಟ್ | ಮುಂಬಡ್ತಿ | 20–05–1966 | 09–10–1991 | 20–04–2006 | 20–04–2006 |
| 4 | ಡಾ॥ಪುನೀತ್ ಬಾಬು | ನೇರ ನೇಮಕಾತಿ | 01–05–1973 | 03–09–2009 | 03–09–2009 | 03–09–2009 |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎನ್.ನರಸಿಂಹರಾಜು,**
ಸರ್ಕಾರದ ಅಧೀನ ಕಾರ್ಯದರ್ಶಿ(ಪ್ರ)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಭಾ.ವೈ.ಪ ಮತ್ತು ಸಮನ್ವಯ)

**PR: 90**
**S.C.10**

## IN THE COURT OF PRINCIPAL CIVIL JUDGE (Jr. Dn) & J.M.F.C. UDUPI

It is here by noticed to publish that the Hiriyadka Police Station, Udupi District, has seized the Quallis Car Registration Bearring No. KA 02 C 1797 in Cr. No. 35/2011, u/s 379,279 I P C. & Section 9,11 Cow Slaughter Act. The Case was disposed in Court on 01.06.2012 in RCS No. 52/2012. The following vehicle is lying in the Hiriyadka Police Station as unclaimed so far. Hence the owner of the properties and vehicle may put their claim within one month from the date of this publication.

Principal Civil Judge & J.M.F.C.
Udupi

Particulars of seized vehicle which is lying in Hiriyadka Police Station, Udupi District

| Sl No | Vehicle Registration No | Engine No | Chasiss No. | Present Stage of the case |
|---|---|---|---|---|
| 1 | No:KA. 02 C 1797 Quallis | 2L 5476660 | LF50-1124230 | Disposed on 01-06-2012 in RCS No.53/2012 |

**PR-46**
**SC-10**

Principal Civil Judge & J.M.F.C.
Udupi

## VTH ADDITIONAL CHIEF METROPOLITAN MAGISTRATE, BANGALORE

**ವಿಷಯ:– ಕಾಮಾಕ್ಷಿಪಾಳ್ಯ ಪೊಲೀಸ್ ಠಾಣೆಯ ವ್ಯಾಪ್ತಿಯಲ್ಲಿ ವಶಪಡಿಸಿಕೊಂಡಿರುವ ವಾಹನಗಳ ವಿವರ**

| ಕ್ರ.ಸಂ | ಎನ್‌ಸಿಆರ್ ನಂ | ಮಾಲುಪಟ್ಟಿ ಸಂ. | ವಾಹನದ ಸಂಖ್ಯೆ | |
|---|---|---|---|---|
| 1 | 1214/13 | 177/13 | 1)KA-02-AA-8861 AUTO RICKSHOW | |
| 2 | ಡಿಟೋ | ಡಿಟೋ | 2)KA-02-A-2730 AUTO RICKSHOW | |
| 3 | ಡಿಟೋ | ಡಿಟೋ | 4) KA-02-2778 AUTO RICKSHOW | |
| 4 | ಪಿಟಿಷನ್ ನಂ 269/13 | 188/13 | 1) KA-03-P-2843 MARUTI ZEN | |
| 5 | ಡಿಟೋ | ಡಿಟೋ | 2) KA-01-P-2127 MARUTHI 800 | |
| 6 | ಡಿಟೋ | ಡಿಟೋ | 3) ಒಂದು ಟಾಟಾ ಇಂಡಿಕಾ ನಂಬರ್ ಇರುವುದಿಲ್ಲ | ಸಂಪೂರ್ಣವಾಗಿ ಸುಟ್ಟು ಹೋಗಿರುತ್ತೆ |

| ಕ್ರ.ಸಂ | ಎನ್‌ಸಿಆರ್ ನಂ | ಮಾಲುಪಟ್ಟಿ ಸಂ. | ವಾಹನದ ಸಂಖ್ಯೆ | |
|---|---|---|---|---|
| 7 | ಡಿಟೋ | ಡಿಟೋ | 3) ಒಂದು ಮಾರುತಿ 800 ಕಾರ್ ನಂಬರ್ ಇರುವುದಿಲ್ಲ | ಸಂಪೂರ್ಣವಾಗಿ ಸುಟ್ಟು ಹೋಗಿರುತ್ತೆ |

**PR-01**

Vth Addl. Chief Metropolitan Magistrate
Bangalore

## ನೋಂದಣಿ ಮತ್ತು ಮುದ್ರಾಂಕ ಇಲಾಖೆ

**ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರು, ಕಂದಾಯ ಭವನ, 8ನೇ ಮಹಡಿ, ಕೆ.ಜಿ. ರಸ್ತೆ, ಬೆಂಗಳೂರು ಇವರ ನಡವಳಿಗಳು**

**ರದ್ದತಿ ಆದೇಶ**

**ವಿಷಯ :** ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಜವಾನರ (ಡಿ–ಗ್ರೂಪ್) ಪರಿಶಿಷ್ಟ ಜಾತಿ ಬ್ಯಾಕ್‌ಲಾಗ್ ಹುದ್ದೆಯಲ್ಲಿ ಜವಾನರೆಂದು ಅಂತಿಮವಾಗಿ ಹೆಚ್ಚುವರಿ ಪಟ್ಟಿಯಲ್ಲಿ ಮಾಜಿ ಸೈನಿಕ ಅಭ್ಯರ್ಥಿಯಾಗಿ ಆಯ್ಕೆಯಾದ ಬಸಪ್ಪ ಹನುಮಪ್ಪ ಚಲವಾದಿ, ಶಲವಡಿ ಪೋಸ್ಟ್, ನವಲಗುಂದ ತಾಲ್ಲೂಕು ಧಾರವಾಡ ಜಿಲ್ಲೆ ಇವರ ಜವಾನರ ಬ್ಯಾಕ್‌ಲಾಗ್ ಹುದ್ದೆಯ ಅಂತಿಮ ಆಯ್ಕೆಯನ್ನು ಹೆಚ್ಚುವರಿ ಪಟ್ಟಿಯಿಂದ ರದ್ದುಪಡಿಸುವ ಬಗ್ಗೆ

**ಉಲ್ಲೇಖ :**

1. ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 13 ಎಸ್‌ಬಿಸಿ 2001, ದಿನಾಂಕ: 21–11–01 (ದಿನಾಂಕ: 22–11–2001 ರಂದು ಕರ್ನಾಟಕ ವಿಶೇಷ ರಾಜ್ಯಪತ್ರದಲ್ಲಿ ಪ್ರಕಟವಾಗಿದೆ)
2. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 08 ಸೆನೆನಿ 2001, ದಿನಾಂಕ: 13–02–2001
3. ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 13/ಎಸ್‌ಬಿಸಿ/2001, ದಿನಾಂಕ: 01–06–2002 (ದಿನಾಂಕ: 14–06–2002 ರಂದು ಕರ್ನಾಟಕ ವಿಶೇಷ ರಾಜ್ಯಪತ್ರದಲ್ಲಿ ಪ್ರಕಟವಾಗಿದೆ)
4. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 97 ಸೆನೆನಿ 2002, ದಿನಾಂಕ: 22–11–2002
5. ಈ ಕಛೇರಿಯ ಅಧಿಸೂಚನೆ ಸಂಖ್ಯೆ: EST-2-235/2003-04, ದಿನಾಂಕ: 04–05–2004 (ದಿನಾಂಕ: 06–05–2004 ರಂದು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾಗಿದೆ)
6. ಈ ಕಛೇರಿಯ ಜವಾನರ ಬ್ಯಾಕ್‌ಲಾಗ್ ಪರಿಷ್ಕೃತ ತಾತ್ಕಾಲಿಕ ಆಯ್ಕೆಪಟ್ಟಿ ಸಂಖ್ಯೆ: ಸಿಬ್ಬಂದಿ–2–235/03–04, ದಿನಾಂಕ: 21–07–2010
7. ಈ ಕಛೇರಿಯ ಜವಾನರ ಬ್ಯಾಕ್‌ಲಾಗ್ ಅಂತಿಮ ಆಯ್ಕೆಪಟ್ಟಿ ಸಂಖ್ಯೆ: ಸಿಬ್ಬಂದಿ–2–235/03–04, ದಿನಾಂಕ: 28–08–2010
8. ಸರ್ಕಾರದ ಆದೇಶ ಸಂಖ್ಯೆ: ಕಂಇ 17 ಮುನೋಸೇ (3) 2011, ದಿನಾಂಕ: 25–04–2011
9. ಜಿಲ್ಲಾ ನೋಂದಣಾಧಿಕಾರಿ ಬಾಗಲಕೋಟೆ ಇವರ ನೇಮಕಾತಿ ಆದೇಶ ಸಂಖ್ಯೆ: ಸಿಬ್ಬಂದಿ–(ಬ್ಯಾಲಾ) –20/11–12/, ದಿನಾಂಕ: 10–01–2012
10. ಜಿಲ್ಲಾ ನೋಂದಣಾಧಿಕಾರಿಗಳು, ಬಾಗಲಕೋಟೆ ಇವರ ರದ್ದತಿ ಆದೇಶ ಸಂಖ್ಯೆ: ಸಿಬ್ಬಂದಿ/2012–13, ದಿನಾಂಕ: 30–04–2012
11. ಜಿಲ್ಲಾ ನೋಂದಣಾಧಿಕಾರಿಗಳು, ಬಾಗಲಕೋಟೆ ಇವರ ಪತ್ರ ಸಂಖ್ಯೆ: ಸಿಬ್ಬಂದಿ/2012–13, ದಿನಾಂಕ: 18–05–2012
12. ಈ ಕಛೇರಿಯ ಸಮಸಂಖ್ಯೆ:ರೀ–ಅಲಾಟ್‌ಮೆಂಟ್ ಆರ್ಡರ್, ದಿನಾಂಕ: 15–11–2012
13. ಜಿಲ್ಲಾ ನೋಂದಣಾಧಿಕಾರಿಗಳು, ಬಾಗಲಕೋಟೆ ಇವರ ಪತ್ರ ಸಂಖ್ಯೆ: ಸಿಬ್ಬಂದಿ/2012–13, 255, ದಿನಾಂಕ: 20–08–2013
14. ಬ್ಯಾಕ್‌ಲಾಗ್ ಅಭ್ಯರ್ಥಿಯಾದ ಬಸಪ್ಪ ಹನುಮಪ್ಪ ಚಲವಾದಿ ಪೋಸ್ಟ್ ಶಲವಾಡಿ ಇವರು ಜಿಲ್ಲಾ ನೋಂದಣಾಧಿಕಾರಿ ಬಾಗಲಕೋಟೆ ಇವರಿಗೆ ದಿನಾಂಕ: 17–08–2013ರಂದು ಬರೆದು ಕೊಟ್ಟಿರುವ ಲಿಖಿತ ಹೇಳಿಕೆ (ಮುಚ್ಚಳಿಕೆ)

**ಪ್ರಸ್ತಾವನೆ:**

ಜಿಲ್ಲಾ ನೋಂದಣಾಧಿಕಾರಿ ಬಾಗಲಕೋಟೆ ಇವರು ಅವರ ಜಿಲ್ಲೆಯ (ಡಿ–ಗ್ರೂಪ್) ಜವಾನರ ವೃಂದದಲ್ಲಿ ಕೆಳಕಂಡಂತೆ ಬ್ಯಾಕ್‌ಲಾಗ್ ಹುದ್ದೆಗಳನ್ನು ಗುರುತಿಸಿರುತ್ತಾರೆ.

| ಕ್ರ.ಸಂ. | ಜಿಲ್ಲೆ | ಸದರಿ ಜಿಲ್ಲೆಯಲ್ಲಿ ಗುರುತಿಸಲ್ಪಟ್ಟ ಬ್ಯಾಕ್‌ಲಾಗ್ ಹುದ್ದೆಗಳು | | |
|---|---|---|---|---|
| | | ಪರಿಶಿಷ್ಟ ಜಾತಿ | ಪರಿಶಿಷ್ಟ ಪಂಗಡ | ಒಟ್ಟು |
| 1 | ಬಾಗಲಕೋಟೆ | ಎರಡು | ಒಂದು | ಮೂರು |

ಮೇಲೆ ಗುರುತಿಸಿದ ಹುದ್ದೆಗಳ ಜೊತೆಗೆ ರಾಜ್ಯದ ಉಳಿದ ಜಿಲ್ಲಾ ನೋಂದಣಾಧಿಕಾರಿಗಳು ಅವರವರ ಜಿಲ್ಲೆಗಳಲ್ಲಿ ಗುರುತಿಸಲ್ಪಟ್ಟ ಬ್ಯಾಕ್‌ಲಾಗ್ ಹುದ್ದೆಗಳನ್ನು ಸೇರಿಸಿಕೊಂಡು ಉಲ್ಲೇಖ (1) (2) (3) ಮತ್ತು (4) ರಲ್ಲಿ ಪ್ರಕಟಿಸಿದ ಬ್ಯಾಕ್‌ಲಾಗ್ ನಿಯಮಗಳನ್ವಯ ಈ ಇಲಾಖೆಯಲ್ಲಿ ಪರಿಶಿಷ್ಟ ಜಾತಿಯ ಹತ್ತೊಂಭತ್ತು ಮತ್ತು ಪರಿಶಿಷ್ಟ ಪಂಗಡದ ಹದಿನೇಳು ಈ ರೀತಿ ಒಟ್ಟಾರೆ ಮೂವ್ವತ್ತಾರು ಜವಾನರ ಬ್ಯಾಕ್‌ಲಾಗ್ ಹುದ್ದೆಗಳನ್ನು ಗುರುತಿಸಿದ್ದು ಈ ಹುದ್ದೆಗಳನ್ನು ರಾಜ್ಯಾದ್ಯಂತ ಭರ್ತಿ ಮಾಡುವ ಸಲುವಾಗಿ ಅಭ್ಯರ್ಥಿಗಳು ಏಳನೇ ತರಗತಿಯಲ್ಲಿ ತೇರ್ಗಡೆ ಹೊಂದಿರಬೇಕೆಂಬ ಕನಿಷ್ಠ ವಿದ್ಯಾರ್ಹತೆಯನ್ನು ನಿಗಡಿಪಡಿಸಿ ಉಲ್ಲೇಖ (5)ರ ಅಧಿಸೂಚನೆಯಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಕರೆಯಲಾಗಿತ್ತು.

ತದನಂತರ ಈ ಬಗ್ಗೆ ಸ್ವೀಕೃತವಾದ ಎಲ್ಲಾ ಅರ್ಜಿಗಳನ್ನು ಪರಿಶೀಲಿಸಿ ಅವುಗಳ ಪೈಕಿ ಉಲ್ಲೇಖ (1)ರ ಬ್ಯಾಕ್‌ಲಾಗ್ ನಿಯಮಗಳ ಪ್ರಕಾರ 29 ರಿಂದ 40 ವರ್ಷ ವಯೋಮಿತಿಯಲ್ಲಿರುವ ಅಭ್ಯರ್ಥಿಗಳ ಅರ್ಜಿಗಳನ್ನು ಗುರುತಿಸಿ ಅಂತಹ ಅಭ್ಯರ್ಥಿಗಳಲ್ಲಿ ಏಳನೇ ತರಗತಿಯಲ್ಲಿ ಅತಿ ಹೆಚ್ಚು ಅಂಕ ಗಳಿಸಿದ ಪರಿಶಿಷ್ಟ ಜಾತಿಯ ಹತ್ತೊಂಭತ್ತು ಮತ್ತು ಪರಿಶಿಷ್ಟ ಪಂಗಡದ ಹದಿನೇಳು ಈ ರೀತಿ ಒಟ್ಟಾರೆ ಗುರುತಿಸಲ್ಪಟ್ಟ ಮೂವತ್ತಾರು ಬ್ಯಾಕ್‌ಲಾಗ್ ಹುದ್ದೆಗಳಿಗೆ ಅನುಗುಣವಾಗಿ Merit ಮತ್ತು ಮೀಸಲಾತಿ ಪ್ರಕಾರ ಜವಾನರ ಪರಿಷ್ಕೃತ ತಾತ್ಕಾಲಿಕ ಆಯ್ಕೆ ಪಟ್ಟಿಯನ್ನು ಉಲ್ಲೇಖ (6)ರನ್ವಯ ಪ್ರಕಟಿಸಿ ತದನಂತರ ಸದರಿ ಪರಿಷ್ಕೃತ ತಾತ್ಕಾಲಿಕ ಆಯ್ಕೆ ಪಟ್ಟಿಯನ್ನು ಬ್ಯಾಕ್‌ಲಾಗ್ ನಿಯಮಗಳನ್ವಯ ಅಂತಿಮಗೊಳಿಸಿ ಒಟ್ಟಾರೆ ಮೂವತ್ತಾರು ಅಭ್ಯರ್ಥಿಗಳಿರುವ ಜವಾನರ ಬ್ಯಾಕ್‌ಲಾಗ್ ಅಂತಿಮ ಆಯ್ಕೆಯ ಮುಖ್ಯಪಟ್ಟಿಯನ್ನು ಮತ್ತು ಮೂವತ್ತಾರು ಅಭ್ಯರ್ಥಿಗಳಿರುವ ಅಂತಿಮ ಬ್ಯಾಕ್‌ಲಾಗ್ ಹೆಚ್ಚುವರಿ ಪಟ್ಟಿಯನ್ನು ಉಲ್ಲೇಖ (7)ರನ್ವಯ ಪ್ರಕಟಿಸಲಾಯಿತು.

ತದನಂತರ ಬಾಗಲಕೋಟೆ ಜಿಲ್ಲೆಯಲ್ಲಿ ಮೇಲ್ಕಂಡಂತೆ ಗುರುತಿಸಲ್ಪಟ್ಟ ಪರಿಶಿಷ್ಟ ಜಾತಿಯ ಎರಡು ಬ್ಯಾಕ್‌ಲಾಗ್ ಹುದ್ದೆಗಳ ಪೈಕಿ ಪರಿಶಿಷ್ಟ ಜಾತಿಯ ಒಂದು ಹುದ್ದೆಯಲ್ಲಿ ಪರಿಶಿಷ್ಟ ಜಾತಿಯ ಬ್ಯಾಕ್‌ಲಾಗ್ ಅಭ್ಯರ್ಥಿಯಾದ ಬಸವಂತ ಮಾಳಪ್ಪ ಮಾದರ ಎಂಬುವರನ್ನು ಮತ್ತು ಸದರಿ ಜಿಲ್ಲೆಯಲ್ಲಿ ಮೇಲ್ಕಂಡಂತೆ ಗುರುತಿಸಲ್ಪಟ್ಟ ಪರಿಶಿಷ್ಟ ಪಂಗಡದ ಒಂದು ಬ್ಯಾಕ್‌ಲಾಗ್ ಹುದ್ದೆಯಲ್ಲಿ ಪರಿಶಿಷ್ಟ ಪಂಗಡದ ಬ್ಯಾಕ್‌ಲಾಗ್ ಅಭ್ಯರ್ಥಿಯಾದ ಗಂಗಮ್ಮ ಎಂಬುವರನ್ನು ಜವಾನರೆಂದು ನೇಮಕ ಮಾಡುವ ಮೂಲಕ ಸದರಿ ಜಿಲ್ಲೆಯಲ್ಲಿ ಮೇಲ್ಕಂಡಂತೆ ಗುರ್ತಿಸಲ್ಪಟ್ಟ ಪರಿಶಿಷ್ಟ ಜಾತಿಯ ಒಂದು ಬ್ಯಾಕ್‌ಲಾಗ್ ಹುದ್ದೆಯನ್ನು ಮತ್ತು ಪರಿಶಿಷ್ಟ ಪಂಗಡದ ಒಂದು ಬ್ಯಾಕ್‌ಲಾಗ್ ಹುದ್ದೆಯನ್ನು ಭರ್ತಿ ಮಾಡಲಾಯಿತು.

ಆದರೆ ಬಾಗಲಕೋಟೆ ಜಿಲ್ಲೆಯಲ್ಲಿ ಗುರ್ತಿಸಲ್ಪಟ್ಟ ಪರಿಶಿಷ್ಟ ಜಾತಿಯ ಇನ್ನೊಂದು ಬ್ಯಾಕ್‌ಲಾಗ್ ಹುದ್ದೆಯನ್ನು ಭರ್ತಿ ಮಾಡಲು ಸದರಿ ಜಿಲ್ಲೆಯಲ್ಲಿ ಜವಾನರ ಹುದ್ದೆಗಳು ಖಾಲಿ ಇಲ್ಲದ್ದರಿಂದ ಸರ್ಕಾರದವರು ಸಾರ್ವಜನಿಕ ಹಿತದೃಷ್ಟಿಯಿಂದ ಬ್ಯಾಕ್‌ಲಾಗ್ ಅಭ್ಯರ್ಥಿಗಳ ನೇಮಕಾತಿಗಾಗಿ ಉಲ್ಲೇಖ (8)ರ ಸರ್ಕಾರದ ಆದೇಶದಲ್ಲಿ ಉಪ ನೋಂದಣಿ ಕಛೇರಿ, ಕಂಪ್ಲಿ (ಬಳ್ಳಾರಿ ಜಿಲ್ಲೆ) ಇಲ್ಲಿ ಖಾಲಿ ಇದ್ದ ಎರಡು ಜವಾನರ ಹುದ್ದೆಗಳ ಪೈಕಿ ಒಂದು ಜವಾನರ ಹುದ್ದೆಯನ್ನು ಉಪ ನೋಂದಣಿ ಕಛೇರಿ, ಕೆರೂರು ಇಲ್ಲಿಗೆ ಸ್ಥಳಾಂತರಿಸಿದ ಕಾರಣ ಉಪ ನೋಂದಣಿ ಕಛೇರಿ, ಕೆರೂರು ಇಲ್ಲಿ ಒಂದು ಜವಾನರ ಹುದ್ದೆಯು ಖಾಲಿ ಇರುವಂತಾಯಿತು.

ಈ ರೀತಿ ಜವಾನರ ಹುದ್ದೆಯು ಬಾಗಲಕೋಟೆ ಜಿಲ್ಲೆಗೆ ಸ್ಥಳಾಂತರಗೊಂಡು ಖಾಲಿ ಇದ್ದ ಕಾರಣ ಸದರಿ ಜಿಲ್ಲೆಯಲ್ಲಿ ಭರ್ತಿಯಾಗದೇ ಉಳಿದ ಪರಿಶಿಷ್ಟ ಜಾತಿಯ ಇನ್ನೊಂದು ಬ್ಯಾಕ್‌ಲಾಗ್ ಹುದ್ದೆಯನ್ನು ಭರ್ತಿ ಮಾಡುವ ಸಲುವಾಗಿ ಉಲ್ಲೇಖ (7)ರನ್ವಯ ಪ್ರಕಟಿಸಿದ ಜವಾನರ ಬ್ಯಾಕ್‌ಲಾಗ್ ಅಂತಿಮ ಆಯ್ಕೆ ಪಟ್ಟಿಯ ಮುಖ್ಯಪಟ್ಟಿಯಲ್ಲಿ ಆಯ್ಕೆಯಾದ ಪರಿಶಿಷ್ಟ ಜಾತಿಯ ಕೆಳಕಂಡ ಬ್ಯಾಕ್‌ಲಾಗ್ ಅಭ್ಯರ್ಥಿಯನ್ನು ಉಪ ನೋಂದಣಿ ಕಛೇರಿ, ಕೆರೂರು ಇಲ್ಲಿಗೆ ಉಲ್ಲೇಖ (9)ರನ್ವಯ ಜವಾನರೆಂದು ನೇಮಕ ಮಾಡಿದ್ದಾಗ್ಯೂ ಇವರು ಸದರಿ ಕಛೇರಿಯಲ್ಲಿ ಕೆಲಸಕ್ಕೆ ಹಾಜರಾಗದೇ ಇದ್ದ ಕಾರಣ ಇವರಿಗೆ ನೀಡಿದ ಸದರಿ ನೇಮಕಾತಿ ಆದೇಶವನ್ನು ಜಿಲ್ಲಾ ನೋಂದಣಾಧಿಕಾರಿ ಬಾಗಲಕೋಟೆ ಇವರು ಉಲ್ಲೇಖ (10)ರನ್ವಯ ಕಾನೂನು ರೀತ್ಯಾ ರದ್ದುಪಡಿಸಿ ಈ ವಿಷಯವನ್ನು ಈ ಕಛೇರಿಗೆ ತಿಳಿಸಿರುತ್ತಾರೆ.

| | | | |
|---|---|---|---|
| 1) | ಗಂಗಪ್ಪ ಯಲ್ಲಪ್ಪ ಮಜಲಟ್ಟಿ, ಮುಕ್ಕಾಂ ಪೋಸ್ಟ್: ಕರೋಶಿ ತಾಲ್ಲೂಕ್: ಚಿಕ್ಕೋಡಿ ಜಿಲ್ಲೆ: ಬೆಳಗಾಂ–591226 | SC | ಪರಿಶಿಷ್ಟ ಜಾತಿ ಮಾಜಿ ಸೈನಿಕ ಅಭ್ಯರ್ಥಿ ಮುಖ್ಯಪಟ್ಟಿ |

ಈ ರೀತಿ ಉಲ್ಲೇಖ (7)ರ ಜವಾನರ ಬ್ಯಾಕ್‌ಲಾಗ್ ಅಂತಿಮ ಆಯ್ಕೆಯ ಮುಖ್ಯಪಟ್ಟಿಯಲ್ಲಿ ಆಯ್ಕೆಯಾದ ಮೇಲ್ಕಂಡ ಪರಿಶಿಷ್ಟ ಜಾತಿಯ ಬ್ಯಾಕ್‌ಲಾಗ್ ಅಭ್ಯರ್ಥಿಯು ಕೆಲಸಕ್ಕೆ ಹಾಜರಾಗದೇ ತಮ್ಮ ನೇಮಕಾತಿ ಹಕ್ಕನ್ನು ಕಳೆದುಕೊಂಡ ಕಾರಣ ಮೇಲ್ಕಂಡಂತೆ ಬಾಗಲಕೋಟೆ ಜಿಲ್ಲೆಯಲ್ಲಿ ಗುರುತಿಸಲ್ಪಟ್ಟು ಭರ್ತಿಯಾಗದೇ ಉಳಿದ ಪರಿಶಿಷ್ಟ ಜಾತಿಯ ಈ ಒಂದು ಬ್ಯಾಕ್‌ಲಾಗ್ ಹುದ್ದೆಯಲ್ಲಿ ನೇಮಕಾತಿ ಮಾಡಿಕೊಳ್ಳಲು ಉಲ್ಲೇಖ (3)ರ ತಿದ್ದುಪಡಿ ಬ್ಯಾಕ್‌ಲಾಗ್ ನಿಯಮಗಳನ್ವಯ ಮೇಲ್ಕಂಡ ಅಭ್ಯರ್ಥಿಯ ಬದಲಿಗೆ ಉಲ್ಲೇಖ (7)ರನ್ವಯ ಪ್ರಕಟಿಸಿರುವ ಜವಾನರ ಬ್ಯಾಕ್‌ಲಾಗ್ ಅಂತಿಮ ಆಯ್ಕೆಯ ಹೆಚ್ಚುವರಿ ಪಟ್ಟಿಯಲ್ಲಿ Merit ಮತ್ತು ಮೀಸಲಾತಿಗೆ ಅನುಗುಣವಾಗಿ ಮಾಜಿ ಸೈನಿಕ ಅಭ್ಯರ್ಥಿಯಾಗಿ ಆಯ್ಕೆಯಾದ ಕೆಳಕಂಡ ಪರಿಶಿಷ್ಟ ಜಾತಿಯ ಬ್ಯಾಕ್‌ಲಾಗ್ ಅಭ್ಯರ್ಥಿಯನ್ನು ಬಾಗಲಕೋಟೆ ಜಿಲ್ಲೆಯಲ್ಲಿ ಜವಾನರೆಂದು ನೇಮಕಾತಿ ಮಾಡಿಕೊಳ್ಳುವುದಕ್ಕಾಗಿ ಉಲ್ಲೇಖ (12)ರ ರೀ–ಅಲಾಟ್‌ಮೆಂಟ್ ಆರ್ಡರ್‌ನಲ್ಲಿ ಸದರಿ ಜಿಲ್ಲೆಗೆ ಅಲಾಟ್ ಮಾಡಿ ಸದರಿ ರೀ–ಅಲಾಟ್‌ಮೆಂಟ್ ಆರ್ಡರ್ ಅನ್ನು ಜಿಲ್ಲಾ ನೋಂದಣಾಧಿಕಾರಿಗಳು ಬಾಗಲಕೋಟೆ ಇವರಿಗೆ ಕಳುಹಿಸಲಾಯಿತು.

ಉಲ್ಲೇಖ (12)ರ ರೀ–ಅಲಾಟ್‌ಮೆಂಟ್ ಆರ್ಡರ್ ಪ್ರಕಾರ ಕೆಳಕಂಡ ಬ್ಯಾಕ್‌ಲಾಗ್ ಅಭ್ಯರ್ಥಿಯಾದ ಬಸಪ್ಪ ಹನುಮಪ್ಪ ಚಲವಾದಿ, ಶಲವಡಿ ಪೋಸ್ಟ್ ಇವರನ್ನು ಬಾಗಲಕೋಟೆ ಜಿಲ್ಲೆಯಲ್ಲಿ ಗುರ್ತಿಸಿದ ಜವಾನರ ಬ್ಯಾಕ್‌ಲಾಗ್ ಹುದ್ದೆಯಲ್ಲಿ ನೇಮಕ ಮಾಡಿಕೊಳ್ಳುವ ಪೂರ್ವದಲ್ಲಿ ಜಿಲ್ಲಾ ನೋಂದಣಾಧಿಕಾರಿ, ಬಾಗಲಕೋಟೆ ಇವರು ಸದರಿ ಅಭ್ಯರ್ಥಿಯ ಜಾತಿ ಸಿಂಧುತ್ವ ಪ್ರಮಾಣ ಪತ್ರವನ್ನು ಜಿಲ್ಲಾಧಿಕಾರಿಗಳಿಂದ ಮತ್ತು ಸದರಿ ಅಭ್ಯರ್ಥಿಯು ಸರ್ಕಾರಿ ಕೆಲಸಕ್ಕೆ ಅರ್ಹರೇ ? ಎಂಬ ಬಗ್ಗೆ ಪೂರ್ವ ಚರಿತ್ರಾ ಪರಿಶೀಲನಾ ವರದಿಯನ್ನು ಪೊಲೀಸ್ ಇಲಾಖೆಯಿಂದ ನಿಯಮಾನುಸಾರ ಅಗತ್ಯವಾಗಿ ಪಡೆಯಬೇಕಾಗಿದ್ದುದರಿಂದ ಇವುಗಳನ್ನು ಕಳುಹಿಸುವಂತೆ ವಿನಂತಿಸಿ ಜಿಲ್ಲಾಧಿಕಾರಿ, ಧಾರವಾಡ ಇವರಿಗೂ ಮತ್ತು ಜಿಲ್ಲಾ ಪೊಲೀಸ್ ಅಧೀಕ್ಷಕರು, ಧಾರವಾಡ ಇವರಿಗೂ ಜಿಲ್ಲಾ ನೋಂದಣಾಧಿಕಾರಿ, ಬಾಗಲಕೋಟೆ ಇವರು ಕ್ರಮವಾಗಿ ಪತ್ರ ಸಂಖ್ಯೆ: ಸಿಬ್ಬಂದಿ 698/699/2012–13, ದಿನಾಂಕ: 11–12–2012ರಂದು ಪತ್ರ ಬರೆದಿದ್ದರ ಮೇರೆ, ಇದಕ್ಕೆ ಉತ್ತರವಾಗಿ ಜಿಲ್ಲಾ ಪೊಲೀಸ್ ಅಧೀಕ್ಷಕರು, ಧಾರವಾಡ ಇವರು ಜಿಲ್ಲಾ ನೋಂದಣಾಧಿಕಾರಿ, ಬಾಗಲಕೋಟೆ ಇವರಿಗೆ ಬರೆದಿರುವ ಪತ್ರ ಸಂಖ್ಯೆ: ಡಿಎಸ್‌ಬಿ/ಪರಿಶೀಲನೆ/1213/13, ದಿನಾಂಕ: 18–01–2013ರ ಪತ್ರದಲ್ಲಿ ಕೆಳಕಂಡ ಬ್ಯಾಕ್‌ಲಾಗ್ ಅಭ್ಯರ್ಥಿಯಾದ ಬಸಪ್ಪ ಹನುಮಪ್ಪ ಚಲವಾದಿ ಶಲವಡಿ ಪೋಸ್ಟ್ ಇವರು ನಮ್ಮ ಇಲಾಖೆಯ ನವಲಗುಂದ ಪಿ.ಎಸ್.ಐ. ಇವರ ಸಮಕ್ಷಮ ದಿನಾಂಕ: 15–01–2013ರಂದು ಲಿಖಿತ

ಹೇಳಿಕೆಯೊಂದನ್ನು ಸಲ್ಲಿಸಿ ಅದರಲ್ಲಿ ತಾನು ಈಗಾಗಲೇ ನವಲಗುಂದ ತಾಲ್ಲೂಕಿನ ಬೆಳಹಾರ ಗ್ರಾಮದಲ್ಲಿ ಆರೋಗ್ಯ ಇಲಾಖೆಯಲ್ಲಿ ಪ್ರಥಮ ದರ್ಜೆ ಸಹಾಯಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದು, ತನಗೆ ಈಗ ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಜವಾನರ ಬ್ಯಾಕ್‌ಲಾಗ್ ಹುದ್ದೆಯ ಕೆಲಸದ ಅಗತ್ಯ ಇರುವುದಿಲ್ಲವೆಂಬ ಲಿಖಿತ ಹೇಳಿಕೆಯನ್ನು ಸಲ್ಲಿಸಿರುವರೆಂದು ಪೊಲೀಸ್ ಅಧೀಕ್ಷಕರು, ಧಾರವಾಡ ಇವರು ವರದಿ ಮಾಡಿರುವ ವಿಷಯವನ್ನು ಜಿಲ್ಲಾ ನೋಂದಣಾಧಿಕಾರಿ, ಬಾಗಲಕೋಟೆ ಇವರು ಉಲ್ಲೇಖ (13)ರನ್ವಯ ಈ ಕಛೇರಿಗೆ ವರದಿ ಮಾಡಿರುತ್ತಾರೆ.

ಇದರ ಜೊತೆಗೆ ಸದರಿ ಬ್ಯಾಕ್‌ಲಾಗ್ ಅಭ್ಯರ್ಥಿಯಾದ ಬಸಪ್ಪ ಹನುಮಪ್ಪ ಚಲವಾದಿ ಇವರು ದಿನಾಂಕ: 15–01–2013ರಂದು ನೀಡಿದ ಹೇಳಿಕೆಯನ್ನು ಮತ್ತು ದಿನಾಂಕ: 17–08–2013ರಂದು ಜಿಲ್ಲಾ ನೋಂದಣಾಧಿಕಾರಿ, ಬಾಗಲಕೋಟೆ ಇವರಿಗೆ ಬರೆದು ಕೊಟ್ಟಿರುವ ಲಿಖಿತ ಮನವಿ (ಮುಚ್ಚಳಿಕೆ)ಯನ್ನು ಸದರಿ ಜಿಲ್ಲಾ ನೋಂದಣಾಧಿಕಾರಿಗಳು, ಬಾಗಲಕೋಟೆ ಇವರು ಉಲ್ಲೇಖ (13)ರ ಅವರ ಪತ್ರದ ಮೂಲಕ ಈ ಕಛೇರಿಗೆ ಕಳುಹಿಸಿರುತ್ತಾರೆ. ದಿನಾಂಕ: 17–08–2013ರ ಲಿಖಿತ ಮನವಿಯಲ್ಲಿ ಸದರಿ ಬಸಪ್ಪ ಹನುಮಪ್ಪ ಚಲವಾದಿಯವರು ತಾನು ಈಗಾಗಲೇ ಬೆಳಹಾರ ಗ್ರಾಮದ ಸರ್ಕಾರಿ ಆರೋಗ್ಯ ಇಲಾಖೆಯಲ್ಲಿ ಪ್ರಥಮ ದರ್ಜೆ ಸಹಾಯಕರಾಗಿ ಕಾರ್ಯನಿರ್ವಹಿಸುತ್ತಿದ್ದು. ಸದರಿ ಆರೋಗ್ಯ ಇಲಾಖೆಯಲ್ಲಿಯೇ ನೌಕರಿ ಮುಂದುವರಿಸಲು ಇಚ್ಛೆ ಪಟ್ಟಿದ್ದು, ನೋಂದಣಿ ಮತ್ತು ಮುದ್ರಾಂಕ ಇಲಾಖೆಯ 'ಡಿ' ಗ್ರೂಪ್ ಬ್ಯಾಕ್‌ಲಾಗ್ ಹುದ್ದೆಯಲ್ಲಿ ಜವಾನರಾಗಿ ಕೆಲಸಕ್ಕೆ ಹಾಜರಾಗಲು ತಾನು ಇಷ್ಟಪಡುವುದಿಲ್ಲವೆಂದು ಈ ಕಾರಣದಿಂದ ತನಗೆ ನೇಮಕಾತಿ ಆದೇಶವನ್ನು ನೋಂದಣಿ ಮತ್ತು ಮುದ್ರಾಂಕ ಇಲಾಖೆಯಿಂದ ನೀಡಬಾರದೆಂದು ಹಾಗೂ ತನ್ನ ಬದಲಿಗೆ ಸದರಿ ಜವಾನರ ಬ್ಯಾಕ್‌ಲಾಗ್ ಹುದ್ದೆಯಲ್ಲಿ ಬೇರೊಬ್ಬ ಅರ್ಹ ಅಭ್ಯರ್ಥಿಯನ್ನು ನೇಮಕ ಮಾಡಿಕೊಳ್ಳಬಹುದೆಂದು ಇದಕ್ಕೆ ತನ್ನ ತಂಟೆ ತಕರಾರುಗಳು ಮತ್ತು ಅಭ್ಯಂತರಗಳೇನೂ ಇರುವುದಿಲ್ಲವೆಂದು ತನ್ನ ಸ್ವಇಚ್ಛೆಯಿಂದ ಉಲ್ಲೇಖ (14)ರನ್ವಯ ಲಿಖಿತ ಮನವಿಯನ್ನು ಸಲ್ಲಿಸಿರುವುದು ಕಂಡು ಬರುತ್ತದೆ.

| ಕ್ರ.ಸಂ. | ಅಭ್ಯರ್ಥಿಯ ಹೆಸರು | SC/ST | ಮೀಸಲಾತಿ ವರ್ಗೀಕರಣ |
|---|---|---|---|
| 1) | ಬಸಪ್ಪ ಹನುಮಪ್ಪ ಚಲವಾದಿ, ಶಲವಾಡಿ ಪೋಸ್ಟ್, ತಾಲ್ಲೂಕ್: ನವಲಗುಂದ, ಜಿಲ್ಲೆ: ಧಾರವಾಡ–582238 | SC | ಪರಿಶಿಷ್ಟ ಜಾತಿ ಮಾಜಿ ಸೈನಿಕ ಅಭ್ಯರ್ಥಿ ಹೆಚ್ಚುವರಿ ಪಟ್ಟಿ |

ಮೇಲ್ಕಂಡ ಕಾರಣಗಳಿಂದ ಉಲ್ಲೇಖ (7)ರನ್ವಯ ದಿನಾಂಕ: 28–08–2010ರಂದು ಈ ಕಛೇರಿಯಿಂದ ಪ್ರಕಟಿಸಿರುವ ಈ ಇಲಾಖೆಯ ಪರಿಶಿಷ್ಟ ಜಾತಿಯ ಜವಾನರ ಬ್ಯಾಕ್‌ಲಾಗ್ ಹುದ್ದೆಯ ಅಂತಿಮ ಆಯ್ಕೆಯ ಹೆಚ್ಚುವರಿ ಪಟ್ಟಿಯಲ್ಲಿ ಮಾಜಿ ಸೈನಿಕ ಅಭ್ಯರ್ಥಿಯಾಗಿ ಜವಾನರೆಂದು ಅಂತಿಮವಾಗಿ ಆಯ್ಕೆಯಾಗಿರುವ ಕೆಳಕಂಡ ಪರಿಶಿಷ್ಟ ಜಾತಿಯ ಅಭ್ಯರ್ಥಿಯಾದ ಬಸಪ್ಪ ಹನುಮಪ್ಪ ಚಲವಾದಿ ಶಲವಡಿ ಪೋಸ್ಟ್ ಇವರ ಕೋರಿಕೆಯಂತೆ ಇವರ ಅಂತಿಮ ಬ್ಯಾಕ್‌ಲಾಗ್ ಹೆಚ್ಚುವರಿ ಆಯ್ಕೆಯನ್ನು ಉಲ್ಲೇಖ (7)ರನ್ವಯ ಪ್ರಕಟಿಸಿರುವ ಅಂತಿಮ ಬ್ಯಾಕ್‌ಲಾಗ್ ಜವಾನರ ಹೆಚ್ಚುವರಿ ಆಯ್ಕೆ ಪಟ್ಟಿಯಿಂದ ಶಾಶ್ವತವಾಗಿ ರದ್ದುಪಡಿಸುವುದು ಸೂಕ್ತವೆಂದು ಮನಗಂಡು ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

## ಆದೇಶ

### ಸಂಖ್ಯೆ: EST-2-235/03-04, ದಿನಾಂಕ: 06–11–2013

ಆದ್ದರಿಂದ ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಉಲ್ಲೇಖ (7)ರನ್ವಯ ದಿನಾಂಕ: 28–08–2010ರಂದು ಈ ಕಛೇರಿಯಿಂದ ಪ್ರಕಟಿಸಿರುವ ಈ ಇಲಾಖೆಯ ಪರಿಶಿಷ್ಟ ಜಾತಿಯ ಜವಾನರ ಬ್ಯಾಕ್‌ಲಾಗ್ ಹುದ್ದೆಯ ಅಂತಿಮ ಆಯ್ಕೆಯ ಬ್ಯಾಕ್‌ಲಾಗ್ ಹೆಚ್ಚುವರಿ ಪಟ್ಟಿಯಲ್ಲಿ ಮಾಜಿ ಸೈನಿಕ ಅಭ್ಯರ್ಥಿಯಾಗಿ ಜವಾನರೆಂದು ಆಯ್ಕೆಯಾಗಿರುವ ಕೆಳಕಂಡ ಪರಿಶಿಷ್ಟ ಜಾತಿಯ ಬ್ಯಾಕ್‌ಲಾಗ್ ಆಭ್ಯರ್ಥಿಯಾದ ಬಸಪ್ಪ ಹನುಮಪ್ಪ ಚಲವಾದಿ ಶಲವಡಿ ಪೋಸ್ಟ್ ಇವರ ಅಂತಿಮ ಬ್ಯಾಕ್‌ಲಾಗ್ ಹೆಚ್ಚುವರಿ ಆಯ್ಕೆಯನ್ನು ಉಲ್ಲೇಖ (7)ರನ್ವಯ ದಿನಾಂಕ: 28–08–2010ರಂದು ಪ್ರಕಟಿಸಿರುವ ಈ ಇಲಾಖೆಯ ಪರಿಶಿಷ್ಟ ಜಾತಿಯ ಜವಾನರ ಬ್ಯಾಕ್‌ಲಾಗ್ ಅಂತಿಮ ಆಯ್ಕೆಯ ಹೆಚ್ಚುವರಿ ಪಟ್ಟಿಯಿಂದ ಈ ತಕ್ಷಣದಿಂದ ಜಾರಿಗೆ ಬರುವಂತೆ ಈ ಮೂಲಕ ರದ್ದುಪಡಿಸಲಾಗಿದೆ ಅಂದರೆ cancel ಮಾಡಲಾಗಿದೆ.

ಕೆಳಕಂಡ ಪರಿಶಿಷ್ಟ ಜಾತಿಯ ಬ್ಯಾಕ್‌ಲಾಗ್ ಆಭ್ಯರ್ಥಿಯಾದ ಬಸಪ್ಪ ಹನುಮಪ್ಪ ಚಲವಾದಿ ಶಲವಡಿ ಪೋಸ್ಟ್ ಇವರು ಇನ್ನು ಮುಂದೆ ಈ ಇಲಾಖೆಯ ಜವಾನರ ಹುದ್ದೆಯ ಮೇಲೆ ಯಾವುದೇ ರೀತಿಯ ನೇಮಕಾತಿ ಹಕ್ಕನ್ನು ಹೊಂದಿರತಕ್ಕದ್ದಲ್ಲವೆಂದು ಮತ್ತು ಯಾವುದೇ ರೀತಿಯಲ್ಲಿ ನೇಮಕಾತಿ ಹಕ್ಕನ್ನು ಸಹ ಸಾಧಿಸತಕ್ಕದ್ದಲ್ಲವೆಂದು ಈ ಮೂಲಕ ಆದೇಶಿಸಿದೆ.

| ಕ್ರಮ ಸಂಖ್ಯೆ | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ಜನ್ಮ ದಿನಾಂಕ | 03–07–2004ರ ಅಂತ್ಯಕ್ಕೆ ಅಭ್ಯರ್ಥಿಯ ವಯಸ್ಸು ವ–ತಿಂ–ದಿ– | ವಿದ್ಯಾರ್ಹತೆ ಮತ್ತು ಶೇಕಡಾವಾರು ಅಂಕಗಳು | ಷರಾ |
|---|---|---|---|---|---|
| 1 | ಬಸಪ್ಪ ಹನುಮಪ್ಪ ಚಲವಾದಿ (SC) ಶಲವಡಿ ಪೋಸ್ಟ್, ತಾಲ್ಲೂಕ್: ನವಲಗುಂದ, ಜಿಲ್ಲೆ : ಧಾರವಾಡ–582238 | 23–07–1968 | 31–11–10 | ಏಳನೇ ತರಗತಿ ಶೇಕಡಾ 56.500 | ದಿನಾಂಕ: 28–08–2010ರ ಈ ಇಲಾಖೆಯ ಪರಿಶಿಷ್ಟ ಜಾತಿಯ ಜವಾನರ ಬ್ಯಾಕ್‌ಲಾಗ್ ಅಂತಿಮ ಆಯ್ಕೆಯ ಹೆಚ್ಚುವರಿ ಪಟ್ಟಿಯಲ್ಲಿ ಮಾಜಿ ಸೈನಿಕ ಅಭ್ಯರ್ಥಿಯಾಗಿ ಆಯ್ಕೆಯಾದ ಈ ಅಭ್ಯರ್ಥಿಯ ಅಂತಿಮ ಬ್ಯಾಕ್‌ಲಾಗ್ ಹೆಚ್ಚುವರಿ ಆಯ್ಕೆಯನ್ನು ಸದರಿ ದಿನಾಂಕದ ಪರಿಶಿಷ್ಟ ಜಾತಿಯ ಜವಾನರ ಬ್ಯಾಕ್‌ಲಾಗ್ ಅಂತಿಮ ಆಯ್ಕೆಯ ಹೆಚ್ಚುವರಿ ಪಟ್ಟಿಯಿಂದ ಈ ಮೂಲಕ ಈ ತಕ್ಷಣದಿಂದ ರದ್ದುಪಡಿಸಿದೆ. |

**ಅಥೋನಿ ಸೈಯ್ಯದ್ ಸಲೀಂ,**
ಆಯ್ಕೆ ಪ್ರಾಧಿಕಾರಿ ಹಾಗೂ ನೋಂದಣಿ ಮಹಾಪರಿವೀಕ್ಷಕರು
ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು

**PR 2448**
**SC 15**

ಸರ್ಕಾರಿ ಕೇಂದ್ರ ಮುದ್ರಣಾಲಯ, ಘಟಕ–2, ಬೆಂಗಳೂರು–59